# ಮಹಿಳಾ ಅನುಭಾವಿಗಳು

ಸಂ. ೧

ರಶ್ಮಿ



ವೇಣಿ ಪಬ್ಲಿಕೇಶನ್ಸ, ಡೋನಾಪಾಲ
ಗೋವಾ

ವಿಶ್ವಭಾರತೀಯ

# ಮಹಿಳಾ ಅನುಭಾವಿಗಳು

ಸಂ. ೧

ವೀನಿ ಪಬ್ಲಿಕೇಶನ್ಸ, ಢೋಣಾಪಾಲ,
ಗೋವಾ

# ಅರ್ಪಣ

ಶೂನ್ಯಕಾಯರಾಗಿ ಭಕ್ತರನ್ನು ಕರುಣೆಯಿಂದ
ನಡೆಸುತ್ತ ಘಳಗಿ–ಹುಲಕೊಪ್ಪವಾಸಿ
**ವ್ಹಾಟಿ ಅಜ್ಜ ಅವರ**
ದಿವ್ಯ ಚರಣ ಕಮಲಗಳಿಗೆ
ಅತ್ಯಂತ ಭಕ್ತಿ ಪೂರ್ವಕ.

ತಸ್ಮಾತ್ ಇದಂ ಗರಂ ಭುಂಜೆ ಪ್ರಜಾನಾಂ ಸ್ವಸ್ತಿರಸ್ತುಮೇ–ಶಿವಉವಾಚ
ತಪ್ಯಂತೆ ಲೋಕ–ತಾಪೇನ ಪ್ರಾಯಶಃ ಸಾಧವೊ ಜನಾಃ
ಪರಮಾರಾಧನಂ ತದ್ ಹಿ ಪುರುಷಸ್ಯಾ–ಖಿಲಾತ್ಮನಃ –ಶುಕ ಉವಾಚ

# ಆಶೀರ್ವಚನ

## ಶ್ರೀ ನಾಗಚಂದ್ರ ಸ್ವಾಮಿಗಳವರಿಂದ

ಭಾರತೀಯ ಋಷಿಪರಂಪರೆ ಮತ್ತು ಸಂಸ್ಕೃತಿಗನುಸರಿಸಿ ಪಿತೃಋಣ, ಋಷಿಋಣ, ದೇವ ಋಣ ಮೊದಲಾದ ಋಣಗಳನ್ನು ತೀರಿಸುವದು ಭಾರತೀಯನ ಧರ್ಮಪಾಲನೆಯಾಗಿದೆ.

ಡಾ. ವ್ಹಿ. ಎಸ್. ಕಂಬಿಯವರು ಅತ್ಯಂತ ಭಕ್ತಿಯಿಂದ ಶಿವಶರಣರ, ಸಕಲ ಸಾಧುಗಳ ಜೀವನ ಚರಿತ್ರೆ ಹಾಗೂ ಅವರ ಅನುಭವಗಳ ವಿಚಾರವನ್ನು ಪ್ರಸಿದ್ಧ ಪಡಿಸುವ ಕಾರ್ಯವನ್ನು ಪೂಜೆಯಂತೆ ಮಾಡುತ್ತಿದ್ದಾರೆ. ಜಗತ್ತಿನ ಜನರಿಗೆ ನಿರ್ಭೀತಿ, ಶಾಂತಿ, ಆತ್ಮವಿಶ್ವಾಸಗಳು ಬೆಳೆದು ಕರುಣಾಮಯ ಬದುಕನ್ನು ಬದುಕಲು ಇಂಥವರ ಜೀವನ ಪಾಠಹೇಳುತ್ತವೆ. ಅವರ ಚರಿತ್ರೆಯ ಓದು ಒಂದು ಆತ್ಮಸ್ನಾನ. ಈ ಸ್ನಾನ ಲಭ್ಯವಾಗಬೇಕಾದರೆ ಭಕ್ತಿವಂತರು ಹಾಗೂ ವಿದ್ಯಾವಂತರಾದವರು ಇವರ ಚರಿತ್ರಗಳನ್ನು ಬರೆದು ಒದಗಿಸಿ ಪುನೀತರಾಗಬೇಕು.

ಈ ಕಾರ್ಯದಲ್ಲಿ ಶ್ರೀಗುರು ಹೋಟೇಶ್ವರನು ಅವರಿಗೆ ಇನ್ನೂ ಹೆಚ್ಚಿನ ಭಕ್ತಿ ಮತ್ತು ಪ್ರತಿಭೆಯನ್ನು ಕರುಣಿಸಲೆಂದು ಹಾರೈಸುವೆ. ಅವರ ಕಾರ್ಯ ಯಶಸ್ವಿಯಾಗಲಿ.

# ಪ್ರಕಾಶಕರ ಮಾತು

"ನದಿಗಳು, ಝರಿಗಳು ತಮ್ಮ ವಿಶ್ರಾಂತಿಯನ್ನು ಸಮುದ್ರವನ್ನು (ಸಾಗರವನ್ನು) ಸೇರುವದರಿಂದ ಪಡೆಯುವಂತೆ ಬ್ರಹ್ಮಚಾರಿ, ವಾನಪ್ರಸ್ಥಿ, ಮತ್ತು ಸನ್ಯಾಸಿಗಳು ಗೃಹಸ್ಥನಲ್ಲಿ ವಿಶ್ರಾಂತಿಯನ್ನು ಪಡೆಯುತ್ತಾರೆ." ಎಂದು ಮನುಸ್ಮೃತಿಯು ಹೇಳಿ ಗೃಹಸ್ಥಾಶ್ರಮದ ಶ್ರೇಷ್ಠತೆಯನ್ನು ಎತ್ತಿ ಹಿಡಿದಿದೆ. ಚತುರಾಶ್ರಮಗಳಲ್ಲಿ ಗೃಹಸ್ಥಾಶ್ರಮವು ಸರ್ವರನ್ನೂ ಪಾಲಕನಂತೆ ಕಾಣುವದು ಭಾರತೀಯ ದಿನನಿತ್ಯ ಬದುಕಿನ ರೀತಿಯಾಗಿರುವುದನ್ನು ನೋಡುತ್ತೇವೆ. 'ಆ ಸಾಕಾರವೇ ಈ ಸಾಕಾರ'ವೆಂದು ಹೇಳುವ ಬಸವಣ್ಣನವರ ವಿಚಾರವಾಗಲಿ ಪ್ಲೇಟೋನು ಪ್ರತಿಪಾದಿಸುವ Theory of Ideas ಎಂಬುದಾಗಲಿ, ಶಿವನಾಗಲಿ, ವಿಷ್ಣುವಾಗಲಿ ಗೃಹಸ್ಥರಾಗಿರುವುದನ್ನು ತಿಳಿಸುತ್ತದೆ. ಭಾರತೀಯ ಧಾರ್ಮಿಕ ಸಾಹಿತ್ಯದಲ್ಲಿ ಶಿವ ಪಾರ್ವತಿ ಅಥವಾ ವಿಷ್ಣು ಲಕ್ಷ್ಮಿಯರು ಆದರ್ಶ ಗೃಹಸ್ಥರು. ಇವರ ಆದರ್ಶವು ಜಗತ್ತಿಗೆ ಆದರ್ಶವಾಗಿದೆ.

ಗೃಹಸ್ಥ ಜೀವನವು ಶಿವನಿಗೆ ಪ್ರಿಯವಾದಂತೆ, ಶಿವಭಕ್ತನಿಗೂ ಪ್ರಿಯ; ವಿಷ್ಣುವಿಗೆ ಪ್ರಿಯವಾದಂತೆ ವಿಷ್ಣು ಭಕ್ತರಿಗೂ ಪ್ರಿಯ. ಶಿವ ಮತ್ತು ಪಾರ್ವತಿಯರು ಬೇರೆ ಬೇರೆ ಅಲ್ಲ ಎಂಬ ವಿಚಾರ ಶೈವರಲ್ಲಿ ಉಂಟು. ಭಕ್ತಿ ಜೀವನದಲ್ಲಿ ಕೂಡ ಅದರ ಮಹತ್ವ ಅಷ್ಟೇ ಇರುತ್ತದೆ. ಅಂದರೆ ಸಂಸಾರದ ಬದುಕು ಪಾರಮಾರ್ಥದ ಬದುಕು ಬೇರೆ ಬೇರೆ ಅಲ್ಲ. ಪಾರಮಾರ್ಥ ಧಾಂಪತ್ಯವೇ ಲೌಕಿಕ ದಾಂಪತ್ಯ. ಪಾರಮಾರ್ಥ ದಾಂಪತ್ಯ ಕೌಟುಂಬಿಕ ಮಮತೆಯೇ ಗೃಹಜೀವನದ ಜೀವ ಜೀವಾಳ. "ಸತಿ ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ" ಎಂದು ಹೇಳುವಲ್ಲಿ ಕೌಟುಂಬಿಕ ಬದುಕು ಪ್ರಿಯತೆಯೂ ಅದರ ಒಂದಂಶವಾಗಿರುವುದು. ದೈಹಿಕ, ಮಾನಸಿಕ, ಆಧ್ಯಾತ್ಮಿಕ ಸಾಮರಸ್ಯವು ಕೌಟುಂಬಿಕ ಜೀವನದಲ್ಲಿಯೇ ವ್ಯಕ್ತವಾಗುವುದು. ಪುರುಷನ ಪೌರುಷತ್ವ, ಸ್ತ್ರೀಯ ಸ್ತ್ರೀಯತ್ವಗಳು ಕೌಟುಂಬಿಕ ಜೀವನದಲ್ಲಿ ಅಥವಾ ಗೃಹದಲ್ಲಿಯೇ ಅಭಿವ್ಯಕ್ತಿ. ವೈಯಕ್ತಿಕ ಸದ್ಗುಣಗಳು, ಸಾಮಾಜಿಕ

ಸದ್ಗುಣಗಳು ಗೃಹದಿಂದಲೇ ಸ್ಫುರಿಸುವವು. ಪೌರುಷವು ಪುರುಷನ ಸತ್ವದ ಸತ್ವ. ಇದು ಆತನ ಎಲ್ಲ ಸದ್ಗುಣಗಳ ಆಗರ. ಅದೇ ರೀತಿ ಸ್ತ್ರೀತ್ವವೂ ಕೂಡ ಸ್ತ್ರೀಯ ರಚನಾತ್ಮಕ ಶಕ್ತಿ, ಸೌಂದರ್ಯ ಶಕ್ತಿ, ಸಂರಕ್ಷಣ ಶಕ್ತಿಗಳ ಸುಂದರ ಸಾಕಾರ. ಇವೆಲ್ಲ ಅಭಿವ್ಯಕ್ತವಾಗಿ ಅರಳಿ ಪರಿಮಳಿಸುವುದು ಗೃಹಸ್ಥ ಮತ್ತು ಗೃಹಿಣಿಗಳು ಆಧ್ಯಾತ್ಮ ಜೀವಿಗಳಾದಾಗ, ಮಕ್ಕಳು ಮರಿಗಳು, ಬಂಧು-ಬಾಂಧವರು, ನೆರೆಹೊರೆಯವರು ಈ ಗುಣಗಳ ಬಹಿರ್ಮುಖತೆಗೆ ಕಾರಣ. ಆಧ್ಯಾತ್ಮಿಕತೆಯು ಈ ಇವರ ಸಂಬಂಧದಲ್ಲಷ್ಟೇ ಅಲ್ಲದೆ ಸಕಲ ಜೀವಾತ್ಮರುಗಳ ವಿಷಯದಲ್ಲಿ ಈ ಸದ್ಗುಣಗಳು ವ್ಯಾಪ್ತಿ ಪಡೆಯುವಂತೆ ಅದರ ಸೀಮೆಯನ್ನು ವಿಸ್ತೃತಗೊಳಿಸುತ್ತದೆ. ಲೌಕಿಕ ಕೌಟುಂಬಿಕತೆ ಈಗ ಪಾರಮಾರ್ಥಿಕ ಕೌಟುಂಬಿಕತೆ ಆಗುತ್ತದೆ.

ಆಧ್ಯಾತ್ಮಿಕ ಉತ್ತುಂಗಶೃಗವನೇರಿದವರು ಗೃಹಸ್ಥರೆ. ಭಾರತದ ಸಾಂಸ್ಕೃತಿಕ ಚರಿತ್ರೆಯಲ್ಲಿ ಇಂಥವರ ಹೆಸರುಗಳು ನಮೂದಿಸಲ್ಪಟ್ಟಿವೆ. ಅವರೇ ಮಾನವ ಕುಲದ ಉಳಿವಿಗಾಗಿ ಅಮೃತತ್ವ ಸಂಪಾದಿಸಿದವರು, ಅಮೃತವಾದವರು. ಆ ಅಮೃತವನ್ನವರು ಸುಶಿಕ್ಷಿತರು ಅಶಿಕ್ಷಿತರು ಎಂದಾಗಲೀ ಬಡವ ಬಲ್ಲಿದರೆಂದಾಗಲೀ ಎಂಬ ಭೇದವರಿಯದೆ ತಂದವರು. ಸರ್ವರಿಗೂ ಅವರು ಹಂಚುವವರು. ಆದರೆ ಅವರಿಗೆ ಕರುಣಾಮಯ ಸ್ಥಿತಿಯಲ್ಲಿದ್ದವರಾಗಿ ಕಂಡವರೆಂದರೆ ಬಡವರಿಗಿಂತ ಸಿರಿವಂತರು. ಅಶಿಕ್ಷಿತರಿಗಿಂತ ಸುಶಿಕ್ಷಿತರು. ಆದ್ದರಿಂದ ಕನಿಕರವನ್ನವರು ಬಡವರಿಗಿಂತ, ಅಶಿಕ್ಷಿತರಿಗಿಂತ ಹೆಚ್ಚು ಸಿರಿವಂತರಿಗೆ ಹಾಗೂ ಸುಶಿಕ್ಷಿತರಿಗೆ ತೋರಿಸಬೇಕಾಗಿದೆ. ಬಡವರು, ಅಶಿಕ್ಷಿತರು ಇವರಂತೆ ಗರ್ವಿಷ್ಠರಿರುವದಿಲ್ಲ ಆ ಅಹಂಕಾರದಿಂದಾಗಿ ಆ ವರ್ಗಗಳು ಸಕಲ ಅವಗುಣಗಳ ಗೂಡುಗಳಾಗಿವೆ. ಅವರು ಸಂಸಾರಗರ ಹೊಡೆದವರು; ಕೆಸರಿನಲ್ಲಿ ಬಿದ್ದ ಪಶುಗಳವರು. ಈ ಸಂಸಾರಿ ಗೃಹಸ್ಥರಿಂದ ಉಪಕಾರಿಯಾದ ವಿಶ್ವಕುಟುಂಬ ಗೃಹಸ್ಥರಾದ ಅವರ ಧರ್ಮ, ಕೆಲವರು ಕೇವಲ ಲೌಕಿಕ ಗೃಹಸ್ಥ ಜೀವನ ಧರ್ಮವನ್ನು ಮಾತ್ರ ಆಚರಿಸಲು ಇಷ್ಟಪಡುವವರು. ಇನ್ನು ಕೆಲವರು ಕೇವಲ ವಿಶ್ವಕುಟುಂಬಿ ಪಾರಮಾರ್ಥಿಕ ಗೃಹಸ್ಥ ಜೀವನವನ್ನು ಮಾತ್ರ ನಡೆಸಿಕೊಂಡು ಹೋಗಲು ಇಷ್ಟವುಳ್ಳವರೆ. ಆದರೆ

ಬೇರೆ ಕೆಲವರು ಲೌಕಿಕ ಮತ್ತು ಪಾರಮಾರ್ಥಿಕ ಗೃಹಸ್ಥ ಜೀವನ ಧರ್ಮ ಗಳನ್ನು ಸಮಸಮವಾಗಿ ಬದುಕುವವರು.

ಪುರುಷೋತ್ತಮನೇ ತಮ್ಮ ಪತಿ ಎಂದು ಬಗೆದು ಅವನೊಡನೆ ಐಚ್ಛಿಕ ವಿವಾಹ ಮಾಡಿಕೊಂಡು ಜೀವನ ನಡೆಸಿದ ಸ್ತ್ರೀಯರಿದ್ದಾರೆ. ಈ ಗ್ರಂಥ ದಲ್ಲಿದ್ದವರೆಲ್ಲ ಈ ಆದರ್ಶ ಪ್ರೇರಿತರಾದವರೆ. ಭಕ್ತಿಯೇ ಮದುವಳಿಗರಾಗಿ ರುವಂಥವರು ಮೀರಾಬಾಯಿ, ಮಾಯಾದೇವಿ ಮತ್ತು ಮಹಾದೇವಿಯಕ್ಕ ಗಳು. ಅವರಜೀವನ ಒಂದು ಕಾವ್ಯವನ್ನೆ ಓದಿದಂತೆ. ಅವರು ಕಾವ್ಯಮಯ ಜೀವನವನ್ನೆ ಬದುಕಿದವರು. ಅವರ ಬದುಕಿನ ಕಾವ್ಯ ವಸ್ತು ಉಪನಿಷತ್ತಿನ ರಸ ಪರಬ್ರಹ್ಮ. ಎಲ್ಲ ರಸಗಳ ಸಂಪತ್ತಿನ ತವರು ಆ ರಸಪುರುಷ. ಆತನೇ ಭಕ್ತಿ. ಯಾಕಂದರೆ 'ಭಕ್ತಿ ಬ್ರಹ್ಮೇತಿ' ಎಂದು ಆಗಮಗಳ ಆಪ್ತವಾಕ್ಯ. ಅದು ನಾನಾ ರಸಗಳಾಗಿ ಅವರಂಗಾಂಗಗಳಲ್ಲಿ ಧುಮ್ಮಿಕ್ಕಿ ಹರಿದಿದೆ. ಅದೇ ನಳ ನಳಿಸಿ ಬೆಳೆದು ಪರಿಪಕ್ವವಾಗಿ ಅವರ ಗೀತಗಳ ತುಂಬೆಲ್ಲ ಪರಿಮಳವನು ಇಡುಗಿದೆ. ಆ ಗೀತಗಳೆ ಆ ರಸರೂಪ ಆ ರಸದಿಂದ ತುಂಬಿ, ಅವರ ಭಾರಕ್ಕೆ ಬಾಗಿ ತೂಗೂತ್ತಿದ್ದಾರೆ. ಅವರ ಆ ಸೌಂದರ್ಯವೆ ಸೌಂದರ್ಯ; ಅದೇ ಎಂದೂ ಮಾಸದ ಸೌಂದರ್ಯ. ಅವರ ಸೌಂದರ್ಯದಲ್ಲಿ ನಯ ನಾಜೂಕ ವಿನಯ ಮಹತ್ವ ತಾಳ್ಮೆ ತ್ಯಾಗ ಅಹಿಂಸೆ ಮಮತೆಗಳು ಚಿಗುರಿಟ್ಟಿವೆ. ಆ ರಸೋನ್ಮಾದಿನಿ ಸೌಂದರ್ಯ ಮೂರ್ತಿಗಳು ಮೈಮರವಿನವರು, ಮನಮರವಿನ ವರು, ಹರನ ಅರಿವಿನವರು. ಇಂಥ ಸುಂದರ ಸುಮಧುರ ಭಕ್ತಿಯ ಬದುಕಿ ನಲ್ಲಿ ಹೆಜ್ಜೆ ಹೆಜ್ಜೆಗೆ ಅಗ್ನಿಪರೀಕ್ಷೆಗೆ ಒಳಗಾದವರು, ಪುಟವಿಟ್ಟ ಚಿನ್ನದಂತಾ ದವರು. ಸಂಸಾರಿಗಳು ಪಡುವ ಕಷ್ಟಗಳು ಕಷ್ಟದ ಸರಪಳಿಯನ್ನೇ ಸೃಜಿಸುವ ಮೂಲಕ ದುಗುಡು ದುಮ್ಮಾನಗಳು ಸಿಬಿಡಗೊಂಡರೆ, ಇವರ ಕಷ್ಟಗಳು ಸತ್ಯ, ಸ್ವಾತಂತ್ರ್ಯ, ಆನಂದಗಳನ್ನೆ ಆಗಿಪೊಯ್ದಂತೆ ಹುಟ್ಟಿಸುವಂಥವು.

ಸಾಮಾಜಿಕ ಭಿನ್ನ ಭಾವ, ದೇಶ ಭಾಷೆ ಕಾಲಗಳ ಭಿನ್ನ ಭಾವವನ್ನರಿ ಯದವರಿವರು ಮಾನವ ಮಾನವೇತರವೆಂದು ಬಗೆಯದವರಿವರು. ವಿಷ ವನ್ನು ಅಮೃತವಾಗಿ ಪರಿಪರ್ತಿಸಿದವರು, ದ್ವೇಷವನ್ನು ಸ್ನೇಹವನ್ನಾಗಿ ಮಾರ್ಪಡಿಸಿಕೊಂಡವರು. ಇವರು ಮಧ್ಯಯುಗದವರಾಗಿದ್ದರೂ ಸ್ಪುಟ್ನಿಕ್

ಅಥವ ಅತಿಮಾನವ ಯುಗದವರಿಗೂ ಆದರ್ಶ. ಇವರ ಬದುಕು ವೃದ್ಧರಿಗೆ ಹಾಗೂ ಬಾಲರಿಗೆಲ್ಲರಿಗೂ ಸ್ಫೂರ್ತಿ ಮತ್ತು ಶಾಂತಿದಾಯಕ.

ವಿಶ್ವಕುಟುಂಬಿಗಳಾದ ಇವರು ಬ್ರಹ್ಮಚಾರಿಗಳಿಗೆ, ಗೃಹಸ್ಥರಿಗೆ, ವಾನಪ್ರಸ್ಥರಿಗೆ ಮತ್ತು ಸನ್ಯಾಸಿಗಳಿಗೆ ಜೀವನಸಾಗರ ಯಾನದಲ್ಲಿ ದೀಪಸ್ತಂಭಗಳು. ಗೃಹಸ್ಥಜೀವನದ ನಾನಾ ಕರ್ತವ್ಯಕರ್ಮಗಳ ಸಂಕೀರ್ಣತೆಯ ಈ ಯುಗದಲ್ಲಿ ದೇಶಪ್ರಗತಿ, ದೇಶಪ್ರೇಮದಿಂದ ವಿಶ್ವಪ್ರೇಮದಲ್ಲಿ ಹೆಜ್ಜೆ ಹಾಕುವಲ್ಲಿ, ಶಾಂತಿ ಸಂಪಾದನೆಯಲ್ಲಿ ಇವರ ಆದರ್ಶ ಬದುಕೊಂದೆ ತಾರಕಮಂತ್ರ.

ಈ ಮಹಾನುಭಾವರ ಬದುಕಿನ ಪರಿಚಯದ ಚಿಕ್ಕ ಹೊತ್ತಿಗೆಗೆ ವ್ಯೋಮಕಾಯರಾದ ಶ್ರೀ ನಾಗಚಂದ್ರ ಮಹಾಸ್ವಾಮಿಗಳು ದಯದೋರಿ ಆಶೀರ್ವಚನ ವಿತ್ತುದಕ್ಕೆ, ಈ ಗ್ರಂಥವನ್ನು ಅರ್ಪಿಸಲು ಒಪ್ಪಿಗೆ ಇತ್ತುದಕ್ಕೆ ಭಕ್ತಿಪೂರ್ವಕ ನಮನಗಳು,

ಈ ಗ್ರಂಥವನ್ನು ಮುದ್ರಿಸಿಕೊಟ್ಟ ಶ್ರೀ ಶಾರದಾ ಪ್ರಿಂಟಿಂಗ ಪ್ರೆಸ್ ಮಾಲಕರಿಗೂ, ಕೆಲಸಗಾರರಿಗೂ ಅಭಿನಂದನೆಗಳು.

# ಪ್ರವೇಶ

ಪ್ರಾತಃಕಾಲ, ಪ್ರಶಾಂತ ವಾತಾವರಣ, ಅರುಣೋದಯವಾಗುವ ಮೊದಲು ಹಕ್ಕಿಗಳು ಅಲ್ಲೊಂದು ಇಲ್ಲೊಂದು ಎಚ್ಚತ್ತು, ಗೈದ ಮಧುರವಾದ ಕೂಜನ ತಂಬೆಲರಿನಲ್ಲಿ ಪಸರಿಸಿದೆ; ಮಲ್ಲಿಗೆ, ಸಂಪಿಗೆಗಳು ಅರಳಿ ಕಂಪು ಇಡದಿರುವ ಸಮಯ. ಅಖಿಲ ಭಾರತ ಆಕಾಶವಾಣಿಯಲ್ಲಿಂದ ಹೊರ ಹೊಮ್ಮುವ ಭ್ರಮರದ ಝೇಂಕಾರದ ಓಂಕಾರ ನಾದವು ತೇಲಿಬಂದು ಕಮಲಗಳು ಅದೇ ಅರಳುವ ಮನೋಹರವಾದ ದೃಶ್ಯದ ಸ್ಮೃತಿಯನ್ನು ಜಾಗೃತಗೊಳಿಸಿ ಆಹ್ಲಾದವನ್ನುಂಟುಮಾಡುತ್ತದೆ. ಈ ಓಂಕಾರ ನಾದವು ಬಾನಿನಲ್ಲಿ ಲೀನವಾಗುವಷ್ಟರಲ್ಲಿಭಕ್ತಿ ಗೀತಗಳ ಮನೋಹರವಾದ ಅನುರಾಗ ರಾಗಾಲಾಪವು. ಸೂರ್ಯೋದಯದ ಹೊಂಗದಿರುಗಳಿಗೆ ಶ್ರವಣ ಸಂಕೀರ್ತನ ಸ್ಮರಣ ಪಾದಸೇವನ ಅರ್ಚನ ವಂದನ ದಾಸ್ಯ ಸಖ್ಯಮತ್ತು ಆತ್ಮ ನಿವೇದನಗಳ ನವವಿಧ ರಂಗನ್ನು ಬಳಿಯುತ್ತದೆ. ಇದು ನಿತ್ಯ ನಡೆವ ಸಹಜ ಭಾವದ ರಾಗಾನುರಾಗದ ಲೀಲಾ ಲೋಲತೆ.

ಶ್ರೀ ಗಿರಿಧರ ಆಗೆ ನಾಚೂಂಗಿ
ನಾಚ ನಾಚ ಪಿವ ರಸಿಕ ರಿಝಾವು,
ಪ್ರೇಮ ಜನಕೊ ಜಾವೂಂಗೀ ।
ಪ್ರೇಮ ಪ್ರೀತಿ ಕೆ ಬಂಧ ಗುಂಘರು,
ಸುರತ ಕಿ ಕಂಚನಿ ಕಾಚೂಂಗಿ ॥
ಲೋಕ ಲಾಜ ಕುಲ ಕಿ ಮರ್ಯಾದಾ,
ಯಾಮಿ ಏಕ ನ ರಾಖೂಂಗಿ।
ಪಿಯಾ ಕಿ ಪಲಂಗಾ ಜಾ ಪಾವಡೂಂಗಿ
ಮೀರಾ ಹರಿ ಸಂಗ ನಾಚೂಂಗಿ ॥

"ನಾನು ಗಿರಿಧರ ಗೋಪಾಲನ ಮುಂದೆ ಕುಣಿಯುವೆ; ಅವನು ಅತ್ಯಂತವಾಗಿ ಸಂತೋಷ ಪಡುವವರೆಗೆ ಕುಣಿಯುವೆ; ಅವನನ್ನು ಪ್ರೀತಿಸು

ವವರನ್ನೂ ನಾನು ಗೌರವಿಸುವೆ. ಕರುಣೆ ಮತ್ತು ಪ್ರೇಮದ ಝಣತ್ಕಾರ ಮಾಡುವ ಗೆಜ್ಜೆಯನ್ನು ಕಾಲಿಗೆ ಕಟ್ಟಿಕೊಳ್ಳುವೆ, ಅವನ ಸ್ಮರಣೆಯ ಬಟ್ಟೆಯ ಧರಿಸಿ ಕುಣಿಯುವೆ. ಮನೆತನದ ಗೌರದ ಹೆಸರುಗಳ ಬಗ್ಗೆ ನಾನು ಕಾಳಜಿ ಮಾಡಲಾರೆ. ಅವು ಜನರೆಲ್ಲರಿಗೆ ಮಹತ್ವದವು ಸರಿ. ನನ್ನ ಪ್ರಿಯತಮ ಹರಿಯ ಹಾಸಿಗೆಯಲ್ಲಿ ನಾನು ಹೋಗಿ ಪವಡಿಸುವೆ. ಅವನ ಪ್ರೇಮಾನಂದ ವನ್ನು ಅನುಭವಿಸುವೆ." ಇದು ಬೇಗಿನ ಜಾವದಲ್ಲಿ ಮಧುರಾ ಭಕ್ತಿಯು ಶೀತಲ ವಾತಾವರಣವನ್ನು ಮಧುವಾತವನ್ನಾಗಿಸುವ ಮೀರಾಬಾಯಿಯ ಭಜನ–ಪ್ರೇಮಗೀತೆ ಅಥವ ಭಕ್ತಿಗೀತ, ಕ್ರಾಂತಿಕಾರೀ ವಿಚಾರದ ಆಚಾರ ವಂತೆ ಇವಳಾರೆಂದು, ಎಲ್ಲಿಯವಳೆಂದು, ಯಾವ ಕಾಲದಲಿದ್ದವಳೆಂದು ಕುತೂಹಲದಿಂದ ಮಕ್ಕಳ, ಮುದುಕರು ಕೇಳಿದರೆ ಅಚ್ಚರಿ ಪಡಬೇಕಿಲ್ಲ.

# ಬಾಲ್ಯ

ಭಾರತ ದೇಶದ ಚರಿತ್ರೆಯು ಮಹಾಭಾರತ ಅದು ನಾನಾ ವಿಧದ ಮಹಾ ಕಥೆಗಳ ಅಥವ ಮಹಾ ಜೀವನಗಳ ಹಾಗೂ ಅನುಭವಗಳ ಕಥನ, ಈ ಮಹಾ ಚರಿತ್ರೆಯ ನಂದನವನದಲ್ಲಿ ಗರಿಗೆದರಿ ನರ್ತಿಸಿ, ದೇವಪ್ರೇಮದ ಪಂಚ-ಬಾಣ ತಾಗಿ ಪಂಚಮ ಸ್ವರದಲ್ಲಿ ಧ್ವನಿಗೈವ ಕೋಗಿಲೆಯಾಗಿ, ಪ್ರೇಮ ಪುರುಷೋತ್ತಮನ ಚರಣಕಮಲ ಬಂಡುಂಡು ಝೇಂಕಾರಗೈವ ತುಂಬಿಯಾಗಿ, ಹಂಸೆಯಂತೆ ಗಂಭೀರವಾಗಿ ಪರ್ತಿಸಿದ ಭಕ್ತಿಯ ಕೋಮಲಾಂಗಿಯೆಂದು ರಾಧಾ ಭಕ್ತಿಯ ಹೆಸರು ಪಡೆದು ಅವಳ ಪ್ರತಿರೂಪವಾದವಳು ಮೇವಾಡದ ಮಹಾರಾಣಿ ಮೀರಾಬಾಯಿ. ಅವಳನ್ನು ಆಧುನಿಕ (ಕಲಿ) ಯುಗದ ರಾಧಾ ಎಂದೇ ಹೇಳುತ್ತಾರೆ.

ಮಹಾಭಾರತದ ಭಕ್ತಿಯ ಪ್ರಕರಣದಲ್ಲಿ ಹೊಸ ಯುಗವು ಸಂತ (ಭಕ್ತ) ಮೀರಾಬಾಯಿಯ ಆಗಮನದಿಂದ ಪ್ರಾರಂಭವಾಯಿತು. ಕಬೀರ ತುಳಸೀದಾಸ, ಸೂರದಾಸ ಮೊದಲಾದವರಂತೆ ಅವಳ ಭಕ್ತಿಯ ಜೀವನದ ಗುರಿಯಲ್ಲಿ ತತ್ವ ಪ್ರತಿಪಾದನೆ, ಸಮಾಜ ಸುಧಾರಣೆ, ಜಾತಿ ಮತ ಪಂಥಗಳ ಸುಧಾರಣೆಗಳು ಸೇರಿಕೊಂಡಿಲ್ಲ. ಕೇವಲ ಮಧುರಾ ಭಕ್ತಿಯ ಭವ್ಯ ಬದುಕಿನ ಜೋತ್ಸ್ನೆ. ಅವಳ ಜೀವನ, ಶುದ್ಧ ಭಕ್ತಿಯ ಮಹಾ ಶಕ್ತಿ ಪ್ರವಾಹ ಧುಮ್ಮಿಕ್ಕಿ ಹರಿವುದರ ಸಾಕಾರ ರೂಪು ಅವಳು. ಈ ಭಕ್ತಿ ಶಕ್ತಿಯಾಗಿ ಅವಳು ಹುಟ್ಟಿನಿಂದ ಹುಲುಸಾಗಿ ಸುಳಿದೆಗೆದು, ಗರಿಗೆದರಿ ಬೆಳದವಳು.

ಉತ್ತರ ಭಾರತ ದೇಶದ ಜೀವನದಲ್ಲಿ ಸಾಂಸ್ಕೃತಿಕ ಗಂಗೆ ಹರಿಗಡೆದ ಶತಮಾನಗಳು 11ರಿಂದ 13ರ ವರೆಗಿನವು. ರಾಜಸ್ಥಾನವುಮಹಮ್ಮದೀಯರಿ ಭಾರತದ ಒಳನಾಡಿಗೆ ಬರುವ ಹೆಬ್ಬಾಗಿಲು. ಅನೇಕ ಯುದ್ಧಗಳಿಂದ ಸಂತ್ರಸ್ತ ನಾಡು ಅದು. 14-15 ಶತಮಾನಗಳಲ್ಲಿ ಶಾಂತತೆಗಾಗಿ ಜನರು ಹಂಬಲಿಸತೊಡಗಿದ್ದರು, ಭಾರತೀಯರ ಸ್ವಭಾವಕ್ಕನುಗುಣವಾಗಿ ಧಾರ್ಮಿಕ ಜೀವನದಲ್ಲಿ ಆ ಶಾಂತಿ ದೊರೆಯುವದೆಂಬ ವಿಚಾರ, ಅದರಂತೆ ಅವರು

ವಿಶ್ವಾಸದಿಂದ ದೇವರ ಕಡೆಗೆ ಮುಖವನು ಹೊರಳಿಸಿದರು. 15ನೆಯ ಶತಮಾನದ ಅಂತ್ಯದಲ್ಲಿ ಭಕ್ತಿಯ ಅಪರಾವತಾರಳಾಗಲಿದ್ದ ಮೀರಾಬಾಯಿ ಮೇಡತಾ ದೊರೆ ರತನಸಿಂಗನ ಮನೆಯಲ್ಲಿ 1498 ರಲ್ಲಿ ಜನಿಸಿದಳು. ರಾವದೂದನ ಪ್ರೀತಿಯ ಮೊಮ್ಮಗಳು ಮೀರಾಬಾಯಿ. ಮರುಳನಾಡಾಗಿ ಹೋಗಿದ್ದ ರಜಪೂತ ದೊರೆಗಳ ಜೀವನದಲ್ಲಿ ಗುಪ್ತ ತಪೋನಿಧಿ ಭಕ್ತಿರೂಪದ ಗಂಗೆಯಾಗಿ ಜರ್ಜರಿತ ಜೀವನದ ಬಾಯಾರಿಕೆಯನ್ನು ಕಳೆದು ತೃಪ್ತಿಯನ್ನುಂಟು ಮಾಡುವದು ತನ್ನಿಂದ ತಾನೇ ಆಯಿತೇ ವಿನಾ ಆ ತಾಯಿ ಮೀರಾಬಾಯಿ ಬಯಸಿ ಸಿದ್ಧಿಸಿದ್ದಲ್ಲ.

ಮೇಡವಾದ ದೊರೆ ರತನಸಿಂಗ ಬಹು ಸುಪ್ರಸಿದ್ಧ ರಜಪೂತ ಶೂರ ರಾಜಪುತ್ರ. ಮೊಗಲ ದೊರೆಗಳ ದಾಳಿಗಳನೇಕನ್ನು ಯಶಸ್ವಿಯಾಗಿಎದುರಿಸಿದ ಧೀರ, ಆ ದಾಳಿಗಳನ್ನು ಎದುರಿಸುತ್ತಿರುವಾಗ ರಣರಂಗದಲ್ಲಿಯೇ ವೀರ ಸ್ವರ್ಗಸ್ಥನಾದ. ಅವಳ ತಂದೆಯು ವೀರಸ್ವರ್ಗ ಸೇರಿದ ಮೇಲೆ ಮಗು ಮೀರಾಬಾಯಿ ದುದಾಜಿಯ ಹತ್ತಿರ ತಾಯಿಯ ಜೊತೆ ಇದ್ದಳು. ರಜಪೂತರು ಮೂಲತಃ ಶಿವಭಕ್ತರು. ಆದರೆ ದುದಾಜಿ ರಾಣಾ ಶುದ್ಧ ವಿಷ್ಣುಭಕ್ತ. ಹೀಗಾಗಿ ಮೀರಾಬಾಯಿ ಮಗುವಾಗಿದ್ದಾಗಲೇ ವೈಷ್ಣವ ಭಕ್ತಿಯ ವಾತಾವರಣದಲ್ಲಿ ಬೆಳೆದುಬಂದಳು,

ಮೀರಾಬಾಯಿಯು ತಾಯಿಯ ಜೊತೆಯಲ್ಲಿ ತಮ್ಮ ಮನೆಯ ಮಾಳಿಗೆಯ ಮೇಲೆ ಒಂದು ದಿನ ನಿಂತುಕೊಂಡ ಸಮಯದಲ್ಲಿ ಮದುವೆಯ ನಂತರದಲ್ಲಿ ನಡೆಯುವ ಮದುಮಗ ಹಾಗೂ ಮದುಮಗಳ ಮೆರವಣಿಗೆಯು ಅವರ ಮನೆಯ ಮುಂದಿನಿಂದ ಹೋಗುತ್ತಿತ್ತು. ಮುಗ್ಧಭಾವದ ಮೀರಾಬಾಯಿಯು ಆ ಮೆರವಣಿಗೆಯ ವೈಭವ ಉತ್ಸಾಹಗಳಿಂದ ತುಂಬಾ ಪ್ರಭಾವಿತಳಾದಳು. ತಕ್ಷಣ ತಮ್ಮ ತಾಯಿಯನ್ನು ಕರಿತು; "ಅಮ್ಮಾ! ನನ್ನ ಇನಿಯ (dulah) ಎಲ್ಲಿ ?" ಎಂದು ಕೇಳಿದಳು. ಆರು ವರುಷದ ಮುದ್ದು ಹಾಗೂ ಮುಗ್ಧ ಮಗಳಿಗೆ ವಿವರಿಸುವ ಬದಲು "ಗಿರಿಧರ ಗೋಪಾಲ" ಎಂದು ಹೇಳಿಬಿಟ್ಟಳು.

ಅಂದಿನಿಂದ ತನ್ನ ಇನಿಯ ಗಿರಿಧರ ಗೋಪಾಲ, ಶ್ರೀಕೃಷ್ಣ ಎಂದೇ ಬಲವಾಗಿ ನಂಬಿಬಿಟ್ಟಳು! ಅದೇ ರೀತಿ ತಾನು ಅವನ ಇನಿಯಳು ಎಂದು ಕೊಂಡಳು. ಮೀರಾಬಾಯಿಯು ಆ ಹೊತ್ತಿನಿಂದ ಗಿರಿಧರ ಗೋಪಾಲನ ಮೂರ್ತಿಯನ್ನು ಶೃಂಗರಿಸುವುದು, ಪೂಜೆಮಾಡುವದು, ನೋಡುವುದು, ನಲಿದಾಡುವುದು, ಕುಣಿಯುವುದು, ಸಂಭಾಷಣೆ ಮಾಡುವದು, ಪ್ರಾರಂಭ ವಾಯಿತು. ತನ್ನ ಜೊತೆಗಾರ್ತಿಯರನ್ನು ಕೂಡಿಕೊಂಡು ಆಟಿಗೆಯ ಮದುವೆ ಯನ್ನು ಹಮ್ಮಿಕೊಂಡು ಆ ಗಿರಿಧರ ಗೋಪಾಲನ ಮೂರ್ತಿಯೊಡನೆ ತನ್ನ ಲಗ್ನವನ್ನು ಮಾಡಿಕೊಂಡೇ ಬಿಟ್ಟಳು. ಅಂತರಂಗ ಮತ್ತು ಬಹಿರಂಗಗಳೆರಡ ರಲ್ಲೂ ಮುಗ್ಧ ಬಾಲೆ ಮಮತೆಯ ಮೋಹದ ಸವಶಾಧಿಯಲ್ಲಿ ಸಿಲುಕಿಕೊಂಡು ಬಿಟ್ಟಳು. ಪುಟ್ಟ ಬಾಲೆ ಗಿರಿಧರ ಗೋಪಾಲನ ರಾಸಲೀಲೆಯ ಕಥೆಗಳನ್ನು ಅತ್ಯಂತ ಕುತೂಹಲ ಮತ್ತು ಪ್ರೀತಿಯಿಂದ ತಾಯಿಯು ಹೇಳುವಾಗ, ಮನೆ ಯಲ್ಲಿ ಕೀರ್ತನ ಪುರಾಣ ಮತ್ತು ಪುಣ್ಯ ಕಥೆಗಳನ್ನು ಹೇಳುವ ಕಾರ್ಯಕ್ರಮ ಗಳು ನಡೆದಾಗ ಏಕ್ಯೈಕ ಚಿತ್ತದಿಂದ ತಾದಾತ್ಮ್ಯ ಭಾವದಿಂದ ಆಲಿಸುತ್ತಿದ್ದಳು. ಆ ಬಾಲ ಭಾವದ ಶುಕ್ಲ ಪರದೆಯ ಮೇಲೆ ಶ್ರೀ ಗಿರಿಧರ ಗೋಪಾಲನು ಮಾಡಿದ ಲೀಲೆಗಳೆಲ್ಲ ಅಚ್ಚಳಿಯದೆ ಉಳಿಯುತ್ತಿದ್ದವು. ಅಂಥ ಮಹಾ ಪುರುಷನ ಪ್ರೇಯಸಿಯಾಗಿ ಆ ಲೀಲೆಗಳನ್ನು ತನ್ನಂತರಂಗದ ವಿಶ್ವದಲ್ಲಿ ಸೃಷ್ಟಿಸಿಕೊಂಡು, ಅವುಗಳಲ್ಲಿ ತಾನೂ ಪಾಲುಗೊಳ್ಳತೊಡಗಿದಳು.

ಒಂದು ದಿವಸ ಸನ್ಯಾಸಿಯೊಬ್ಬ ತನ್ನ ಇಷ್ಟ ದೈವವಾದ ಬಾಲ ಗೋಪಾಲನ ಚಿಕ್ಕ ಮೂರ್ತಿಯನ್ನು ಹಿಡಿದುಕೊಂಡು ಭಿಕ್ಷೆಗೆ ಅವರ ಮನೆಗೆ ಬಂದನು. ಆ ಸನ್ಯಾಸಿಗೆ ಭಿಕ್ಷೆ ನೀಡಲು ತಾಯಿಯ ಜೊತೆಯಲ್ಲಿ ತಾನೂ ಹೋದಾಗ ಆ ಸನ್ಯಾಸಿಯ ಹತ್ತಿರವಿದ್ದ ಬಾಲಗೋಪಾಲನ ಸುಂದರ ಮೂರ್ತಿ ಯನ್ನು ನೋಡಿ ಆಕರ್ಷಿತಳಾಗಿ, ಅದು ತನಗೆ ಬೇಕೆಂದು ತಾಯಿಗೆ ಹೇಳಿ ಇಸಿದುಕೊಡುವಂತೆ ಕೇಳಿದಳು. ಮಗಳ ಮನಸ ಬಯಕೆಯನ್ನು ತಾಯಿಯು ಅರಿತುಕೊಂಡಿದ್ದ ಕಾರಣ ಅವಳ ಇಷ್ಟಪೂರ್ತಿಗಾಗಿ ಅವನ ಹತ್ತಿರದ ಮೂರ್ತಿಯನ್ನು ಕೊಡುವಂತೆ ಆ ಸನ್ಯಾಸಿಯನ್ನು ಕೇಳಿದಳು. ಸನ್ಯಾಸಿಗೆ ಆ ಮೂರ್ತಿಯೇ ಸರ್ವಸ್ವವು. ಅದನ್ನು ಕೊಡುವ ಮನಸ್ಸು ಅವನಿಗಿಲ್ಲ. ಯಾಕೆಂದರೆ ಅದು ಅವನ ದೇವರು. ಅವನು ಪ್ರತ್ಯುತ್ತರವಾಗಿ ವಿನಯ

ಪೂರ್ವಕ "ತಾಯಿ ಅದು 'ತನ್ನಿಷ್ಟ'" ವೆಂದು ಹೇಳಿ ಹೋಗಿಬಿಟ್ಟನು. 'ಇಷ್ಟದೇವತೆ'ಯನ್ನು ಕೊಡಬಾರದೆಂಬುದು, ಅದನ್ನು ಆಗಲಿ ಇರಬಾರ ದೆಂಬುದು ಧಾರ್ಮಿಕ ಕಠೋರ ನಿಯಮ. ಸನ್ಯಾಸಿಯು ಈ ನಿಯಮವನ್ನು ಮುರಿದುಬಿಡುವುದು ಸಾಧ್ಯವಿರಲಿಲ್ಲವೆಂಬುದು ಧಾರ್ಮಿಕ ಆಚರಣೆಗಳಲ್ಲಿ ವಿಶ್ವಾಸವುಳ್ಳವರಿಗೆ ಗೊತ್ತು. ಮೀರಾಬಾಯಿಯ ತಾಯಿಯು ಸನ್ಯಾಸಿ ಹೇಳಿದುದನ್ನು ಅವಳಿಗೆ ತಿಳಿಸಿದಳು. ಆ ದಿನ ರಾತ್ರಿ ಸನ್ಯಾಸಿಯ ಕನಸಿನಲ್ಲಿ ಗಿರಿಧರ ಗೋಪಾಲನು ಬಂದು "ನೀನು ನನ್ನ ಭಕ್ತನಲ್ಲವೇ? ನಿನ್ನ ಬಳಿಯಿರುವ ಈ ಚಿಕ್ಕ ಮೂರ್ತಿಯನ್ನು ಮೀರಾಬಾಯಿಗೆ ಕೊಡು" ಎಂದು ಅಪ್ಪಣೆ ಮಾಡಿದನು.

ಆ ಸಾಧು ಮರುದಿವಸ ಬೆಳಗು ಮುಂಜಾವಿನಲ್ಲಿ ಪುನಃ ಅವರ ಮನೆಗೆ ಬಂದು ಮೀರಾಬಾಯಿಗೆ ಆ ಬಾಲಗೋಪಾಲನ ಚಿಕ್ಕ ಮೂರ್ತಿಯನ್ನು ಕೊಡುತ್ತ, 'ಇದು ನನ್ನ ಬಾಳಿನ ಸಾರ ಸರ್ವಸ್ವ, ಅಮೂಲ್ಯವಾದ ಧಾರ್ಮಿಕ ಸಂಪತ್ತು, ಇದನ್ನು ತೆಗೆದುಕೊಳ್ಳಿ. ದೇವರು ಇದನ್ನು ಮೀರಾಬಾಯಿಗೆ ಕೊಡಲು ನನ್ನ ಕನಸಿನಲ್ಲಿ ಬಂದು ಅಪ್ಪಣೆಮಾಡಿ ಹೋಗಿದ್ದಾನೆ" ಎಂದು ಹೇಳಿ ಭಕ್ತಿಯ ಪ್ರಾಣರೂಪವಾದ ಆ ಚಿಕ್ಕ ಮೂರ್ತಿಯನ್ನು ಇತ್ತು ಹೋದನು.

ಮೀರಾಬಾಯಿಗೆ ಬಾಲಗೋಪಾಲನ ಮೂರ್ತಿಯನ್ನು ಕೊಟ್ಟ ಸಾಧುವು ಬೇರೆ ಯಾರೂ ಆಗಿರದೆ ಆ ಕಾಲದ ಶ್ರೇಷ್ಠ ಸಂತನಾದ ರೈದಾಸನು ಎಂದು ಪ್ರತೀತಿಯಿದೆ. ತನ್ನ ಒಂದು ಪದದಲ್ಲಿ ರೈದಾಸನು ಗುರು ಎಂದೂ ಹೇಳಿದ್ದೂ ಉಂಟು. ರೈದಾಸನಿಗೆ ಮೀರಾಬಾಯಿ ಭೇಟಿ ಆದ ಸ್ಥಳವನ್ನು ಇಂದಿಗೂ ತೋರಿಸುತ್ತಾರೆ. ತನಗೆ ಪಂಚಪ್ರಾಣವಾದ ಗಿರಿಧರಗೋಪಾಲನ ಮೂರ್ತಿ ಯನ್ನು ಕೊಟ್ಟು, ಅದನ್ನು ಕೊಡಲು ದೇವರ ಅಪ್ಪಣೆಯಾಗಿದೆಯೆಂದು ಹೇಳಿದ ಆ ಸಾಧುವಿನ ಬಗ್ಗೆ ಬಾಲೆ ಲೋಲೆ ಮೀರಾಬಾಯಿಗೆ ಅದೆಷ್ಟು ಗೌರವ, ಭಕ್ತಿಗಳು! ಮೂರ್ತಿಯ ಹಸ್ತಾಂತರದ ವಿಲಕ್ಷಣ ಹಾಗೂ ಹೃದಯ ಸ್ಪರ್ಶಿಯಾದ ದೃಶ್ಯವು ಕಣ್ಣುಮುಂದೆ ಬಂದರೆ ಆಗ ಆ ಘಳಿಗೆಯ ವಿಚಿತ್ರ ಪೂರ್ಣಮಾದ ಬೋಧೆಯು ಮೈ ರೋಮಾಂಚನವಾಗುವಂತೆ ಮಾಡುತ್ತದೆ. ಸಾಧುವಿಗೆ

ಮೂರ್ತಿಯ ತ್ಯಾಗವು ಎಷ್ಟು ಕಷ್ಟದಾಯಕವೊ, ಅದೇ ವೇಳೆಗೆ "ಅದನ್ನು ಮೀರಾಬಾಯಿಗೆ ಕೊಡು" ಎಂದು ದೇವರ ಅಪ್ಪಣೆಯು ದೊರೆತ ಭಾಗ್ಯದ ನೆನಪು ಅಷ್ಟೇ ಆನಂದದಾಯಕ. ಆ ಸಾಧುವು ಆ ಮೂರ್ತಿಯನ್ನಿತ್ತ ದರಿದ್ರಾವಸ್ಥೆಯವನಾಗುತ್ತಿರುವುದು ಪ್ರತ್ಯಕ್ಷವಾಗುತ್ತಿರುವ ದಾರುಣ ಚಿತ್ರದ ಜೊತೆ ಜೊತೆಯಲ್ಲಿ ತನಗೆ ಆ ಇಷ್ಟದೇವತೆ ದೊರೆತುದರ ಸೌಭಾಗ್ಯ ಸಂಪಾದನೆಯ ಆನಂದದ ಉಬ್ಬಿನ ಚೇತೋಹಾರಿಯಾದ ಅನುಭವ ಮೀರಾಬಾಯಿಗೆ. ಮೀರಾಬಾಯಿಗೆ ಕನಸಿನ ಸುಂದರ ಹೊಸ ಜಗತ್ತಿನ ಪ್ರವೇಶದ ಅನುಭವ. ಮೀರಾಬಾಯಿ ತುಂಬ ಕೃತಜ್ಞತಾಭಾವದಿಂದ ಆ ಸಾಧುವಿನತ್ತ ನೋಡಿದರೆ, ಆ ಸಾಧುವು ಮೀರಾಬಾಯಿಯ ಕಣ್ಣಲ್ಲಿ ಭಕ್ತಿಯ ಶುದ್ಧ ಜ್ಯೋತಿಯನ್ನು ಕಂಡು ಧನ್ಯತೆಯ ಭಾವದಿಂದ ಬೀಗಿ ಆಶೀರ್ವಾದದ ದಿವ್ಯಾನಂದದ ಬೆಳಕು ಸಹಜವಾಗಿ ಅವನ ಕಣ್ಮನ ಹಸ್ತಗಳಿಂದ ಹೊರ ಹೊಮ್ಮಿತು. ಬೋಧೆಯಿಲ್ಲದ ಗುರುಬೋಧೆ; ಮಂತ್ರವಿಲ್ಲದ ದೀಕ್ಷೆ ನಡೆದುಹೋದವು ಆ ಕ್ಷಣದಲ್ಲಿ. ರೈದಾಸ ಯಾರಿಗೂ ಗೊತ್ತಿಲ್ಲದೆ ಮುಗ್ಧ ಚೆಲುವೆ ದೇವಪ್ರೇಮಿ ಮೀರಾಬಾಯಿಗೆ ಗುರುವಾದನು. ರೈದಾಸನು ಗುರುವಾದದ್ದು ಅವಳಿಗೆ ಗೊತ್ತಿಲ್ಲದಿರಬಹುದು. ಆದರೆ ಆ ಇಷ್ಟದೇವತೆಯನ್ನು ಕೊಟ್ಟು ಮೆಚ್ಚುಗೆಗೆ ಪಾತ್ರವಾದದ್ದು ಮೀರಾಬಾಯಿಗೆ ಗೊತ್ತೇ ಗೊತ್ತು, ಆ ಮೂರ್ತಿಯ ಜೊತೆಯಲ್ಲಿ ರೈದಾಸನ ತ್ಯಾಗ ಮತ್ತು ಗಿರಿಧರನ ಬಗೆಗಿನ ನಿಷ್ಠೆಗಳು ಅವಳಿಜವಳಿಯಾಗಿ ಮೀರಾಬಾಯಿಯ ಪೂಜಾ ಗೃಹದಲ್ಲಿ ನಿತ್ಯ ಪೂಜೆಗೊಳ್ಳತೊಡಗಿದವು.

ಆಟದಲ್ಲಿ ಬೇಟ ಬೆಳೆಯಿತು. ಅವಳ ಆಟದ ಕೇಂದ್ರ ಬಿಂದು ಗಿರಿಧರನಾಗರ ಅಥವಾ ಶ್ಯಾಮನಾಗಿ ಅವಳ ನಿತ್ಯದತ್ತಣ ಲಕ್ಷ್ಯವು ನಿತ್ಯ ವಾಗಿರುವಂತೆ ಮಾಡಿದ ಮಾಟಗಾರನಾದ. ಪುಟ್ಟ ಕೈಗಳಿಂದ ಪೂಜೆಗೊಂಡ. ಪುಟ್ಟ ಪಾದಾರವಿಂದಗಳು ಗೆಜ್ಜೆಗಳಿಂದ ಅಲಂಕರಿಸಿಕೊಂಡು ನೃತ್ಯ ಮಾಡು ವಲ್ಲಿ, ಭಜನಗಳನ್ನು ಹಾಡುವಲ್ಲಿ ಮೈಮರೆವುದನ್ನು ಆತನು ಕಂಡು ಅಹ್ಲಾದ ಗೊಂಡು ಕೊಳಲನ್ನು ತುಟಿಯ ಮೇಲಿಟ್ಟುಕೊಂಡ ಭಕ್ತ ದಾಸನಾದ ಶ್ಯಾಮನು ಮೀರಾಬಾಯಿಗೆ ಸಂಗಾತಿ.

ದಿನನಿತ್ಯ ಮೀರಾಬಾಯಿಯು ದೇವರ ಪೂಜೆ ಮಾಡುತ್ತಿರುವುದು, ಆತನ ಮುಂದೆ ನೃತ್ಯ ಮಾಡುತ್ತಿರುವುದು ಅವಳ ಅಜ್ಜ ರಾವದೂದಾಗೆ ಒಮ್ಮೆ ಹರ್ಷವನ್ನು. ಮರುಕ್ಷಣದಲ್ಲಿ ತಲ್ಲಣವನ್ನು ಉಂಟುಮಾಡುತ್ತಿತ್ತು. ರಾಜಕುಮಾರಿಯಾದ ಮತ್ತು ಮನೋಹರಳಾದ ಅವಳು ಗಾನಕೋಗಿಲೆಯಾಗಿ ಹಾರುತ್ತ, ಹಾಡುತ್ತ ನಲಿದಾಡುವ ಬದಲು, ಅರಗಿಳಿಯಾಗಿ ಅರಮನೆಯಲ್ಲಿರಬೇಕೆಂಬ ಪರಂಪರಾಗತವಾದ ರಾಜಮನೆತನದ ಗೃಹಿಣಿಯ ಕನಸನ್ನು ಅವಳ ಬದುಕಿನಲ್ಲಿ ಕಾಣುವ ಹಂಬಲ ಅಜ್ಜ ರಾವದೂದನಿಗೆ. ಅಜ್ಜ ರಾವದೂದಾ ಒಂದು ದಿನ ಮೊಮ್ಮಗಳಿಗೆ ಅಂದವಾದ ಒಂದು ರತ್ನದ ಹಾರವನ್ನು ಕೊಡಬೇಕೆಂಬ ಪ್ರೀತಿಯಿಂದ ಅದನ್ನು ಕೈಯಲ್ಲಿ ಹಿಡಿದುಕೊಂಡು, ಅವಳನ್ನು ಕುರಿತು ಮಾತನಾಡುತ್ತ ಒಳಗೆ ಬರುವುದನ್ನು ಅರಿತು ಕುಣಿಯುತ್ತಿದ್ದ ಮೀರಾಬಾಯಿ ಲಜ್ಜಾಯುಕ್ತಳಾಗಿ ಮರೆಗೆ ಹೋದಳು. ಮೊಮ್ಮಗಳ ಹತ್ತಿರ ಹೋಗಿ ತಾನು ಕೊಡಮಾಡಿದ ಶ್ವೇತರತ್ನಹಾರವನ್ನು ಕೈಗಿತ್ತು, ರಾಜಕುಮಾರಿಯಾದ ನೀನು ಈಗ ಮದುವೆಯ ವಯಸ್ಸಿನಲ್ಲಿ ಕಾಲಿಟ್ಟುದರಿಂದ ತುಸ ದಿನಗಳಲ್ಲಿ ರಾಣಿಯಾಗುವವಳು: ಪಟ್ಟದರಸಿಯಾಗಿ ಗಂಭೀರವಾಗಿದ್ದು ಮನೆತನದ ಘನತೆ ಗೌರವಗಳನ್ನು ಹೆಚ್ಚಿಸುವಲ್ಲಿ, ಪತಿಗೆ ಸರಸಸಲ್ಲಾಪದಲ್ಲಿ ಸಲಹೆಯನ್ನಿತ್ತು, ಆಡಳಿತದ ಹೊಣೆಯಲ್ಲಿ ಭಾಗಿಯಾಗಬೇಕಾಗುವದನ್ನು ನೀನು ಮುಂದೆ ನೋಡಬೇಕಾದ ಸಿದ್ಧತೆಯ ಕಾಲವಿದು ಎಂದು ಹೇಳುತ್ತಿರುವ ಅಜ್ಜ ರಾವದೂದಾನ ಮಾತಿನ ಧ್ವನಿಯ ಅರ್ಥವು ಪ್ರತಿಭಾವಂತೆಗೆ, ವರಕವಿಯಿತ್ರಿಗೆ ಆಗಲು ಬಹಳ ವೇಳೆ ಬೇಕಾಗಲಿಲ್ಲ.

ಮದುವಳಿಗೆಯಾಗಿ ಅಂತರಂಗ ಮತ್ತು ಬಹಿರಂಗಗಳಲ್ಲಿ ಗಿರಿಧರ ಗೋಪಾಲನನ್ನಗಲದ ಮೀರಾಬಾಯಿ, ಅಜ್ಜನುಕೊಟ್ಟ ಶ್ವೇತರತ್ನಹಾರದಿಂದ ತಾನು ಅಲಂಕೃತಗೊಳ್ಳುವ ಬದಲು, ಅದನ್ನು ತನ್ನ ಪ್ರಿಯತಮನ ಕೊರಳಿಗೆ ಹಾಕಿ ಅಂದಚಂದವನ್ನು ಸವಿಯುದಲ್ಲಿ ಅಜ್ಜನು ಪಾಲುಗಾರನಾಗುವಂತೆ ಮಾಡಿದಳು. ಭಜನ, ನರ್ತನಗಳು ದೇವರನ್ನೊಲಿಸುವದಕ್ಕಾಗಿ ಇರುವುದನ್ನು ಅಜ್ಜನಿಗೆ ತಿಳಿಸಬೇಕಾಗಿರಲಿಲ್ಲವಾದರೂ ತನ್ನ ಭಕ್ತಿಭಾವೋನ್ಮಾದದಲ್ಲಿ ತಾನು ಆಯ್ಕೆಮಾಡಿದ ಜೀವನ ಗೃಹಸ್ಥ ಜೀವನದಿಂದೇನು ಕೊರತೆಯದಲ್ಲವೆಂದು ಅಭಿವ್ಯಕ್ತಗೊಳಿಸಿದಳು. ಕಾಯಾ, ವಾಚಾ ಮತ್ತು ಮನಸಾ ಭಕ್ತಿಭಾವದಲ್ಲಿ

ಬದುಕುತ್ತಿದ್ದ ಮೀರಾಳ ಸತ್ಯ ಸಾತ್ವಿಕ ಶ್ರದ್ಧಾ ಪೂರ್ಣವಾದ ಭಕ್ತಿಭಾವವನ್ನು ಮೆಚ್ಚಿ ದೇವರ ಶೃಂಗಾರದಲ್ಲಿ ಸಂತೋಷಗೊಳ್ಳುವ ಮೀರಾಬಾಯಿ ಜೊತೆ ತಾನೂ–ರಾವದೂದಾ–ಪಾಲುಗೊಂಡು ಗಿರಿಧರನಾಗರನ ರಾಣಿಯಾಗುವಂಥ ಮಹಾವ್ರತಸ್ಥಳಾದುದು ತನ್ನ ಕುಲದ ಭಾಗ್ಯವೆಂದು ತಿಳಿದು, ಅವಳನ್ನು ಆ ಪವಿತ್ರ ಜೀವನದಿಂದ ವಿಮುಖಗೊಳಿಸಲು ಯತ್ನಿಸುವುದುಮೂರ್ಖತನವೆಂದು ಬಗೆದು, ಅವಳ ಆ ದೃಢನಿರ್ಧಾರದ ಅಚಲ ಶ್ರದ್ಧೆಯ ಬದುಕಿಗೆ ಅನುಕೂಲ ಮಾಡಿಕೊಟ್ಟು ಪುನೀತನಾಗಬೇಕೆಂದು ನಿಶ್ಚಯಿಸಿದನು. ಅವಳ ಶ್ಯಾಮನ ಪೂಜೆ, ನೃತ್ಯ ಹಾಗೂ ಭಜನಾ ಕಾರ್ಯಕ್ರಮಗಳಿಗೆ ವ್ಯತ್ಯಯವುಂಟಾಗದಂತೆ ಏರ್ಪಾಡು ಮಾಡಿದನು.

ರಾಮ ರತನ ಧನ ಪಾಯೊ
  ಮ್ಯೆತೊ ರಾಮ ರತನ ಧನ ಪಾಯೊ
ಖರಜ್ ನ ಖೂಟೆ ಚೋರ ನ ಲೂಟೆ
  ದಿನ ದಿನ ಹೋತ ಸವಾಯೋ ।

ಖಟಕರ—

ಸತ ಕಿ ನಾವ ಖೇವಟಿಯಾ ಸತಾಗುರು
  ಭವಸಾಗರ ತರ ಆಯೋ
ಮೀರಾಕೆ ಪ್ರಭು ಗಿರಿಧರನಾಗರ
  ಹರಖ ಹರಖ ಜಸ ಗಾಯಾ ॥

"ಐಸೇ ವರಕೋ ಕ್ಯಾ ಕರೂ ಜೋ ಜನಮೆ
  ಔರ ಮರ ಜಾಯ ।
  ವರ ವರಿಯ ಏಕ ಸಾವರೀ ರೀ ॥

ಹುಟ್ಟುವ ಸಾಯುವ ಈ ಮನುಜರನ್ನು ಪತಿಯಾಗಿ ಮಾಡಿಕೊಳ್ಳುವ ದರಲ್ಲಿ ಅರ್ಥವೇನಿದೆ ? ಎಂದು ಪ್ರಶ್ನಿಸಿದಳು, ಅಜ್ಜ ಕೊಟ್ಟ ರತ್ನದ ಹಾರ ವನ್ನು ಶ್ಯಾಮನ ಕೊರಳಿಗೆ ಹಾಕಿ ಮೀರಾಬಾಯಿ ಹೇಳಿದ ಹಾಡು ಅರ್ಥ ಪೂರ್ಣವಾಗಿದೆ. "ರಾಮ" ಎಂಬ ರತನವನ್ನು ಅವಳು ತಾನು ತನ್ನ ನಾಲಗೆಯ ಮೇಲೆ ಧರಿಸಿದಳು. ಆ ರತ್ನವು ಯಾರಿಂದಲೂ ಕಳವಾಗುವಂಥದಲ್ಲವೆಂದು ಹೇಳಿದ ಅವಳು, ಈ ರತ್ನವು ಅಂತರಂಗವನ್ನು ತಣಿಸುವುದು ಅಮೃತತ್ವವನ್ನು ಉಂಟುಮಾಡುವುದು ವಿನಾ ಕರುಳ (ಪ್ರೀತಿ) ಕೊರೆದು ಮರಣವನ್ನುಂಟು ಮಾಡಲಾರದು, ಎಂದು ಮೀರಾಬಾಯಿ ಬಲ್ಲಳು, ದೇವರ ನಾಮವು ರತ್ನ ವೆಂದು ಹೇಳಿ, ಮನವು ಯಾವುದಕ್ಕಾಗಿ ಹಂಬಲಿಸುತ್ತದೆ ಎಂಬುದನ್ನು ಮೀರಾಬಾಯಿ ಆ ನಾಮ ಮಹಿಮೆಯನ್ನೂ ಬಹಿರಂಗಗೊಳಿಸಿದ್ದಾಳೆ. ಅಜ್ಜ ರಾವದೂದಾ ಕೊಟ್ಟ ರತ್ನ ಹಾರಕ್ಕಿಂತ ಮಿಗಿಲಾದ ರತ್ನದ ಪರಿಚಯವನ್ನು ತನ್ನ ಮಧುರ ಕಂಠದಿಂದ ಮಧು ತತ್ವಬೋಧೆಯಿಂದ ಅಜ್ಜ ರಾವದೂದಾಗೆ ನಲಿ ನಲಿದಾಡಿ ಹಾಡಿ ಮಾಡಿಕೊಟ್ಟಾಗ ರಾವದೂದಾ ಧನ್ಯತೆಯಿಂದ ಮೈ ಮರೆತಿದ್ದರೆ ಅಚ್ಚರಿ ಪಡಬೇಕಾಗಿಲ್ಲ. ಮೀರಾಬಾಯಿಗೆ ಅಜ್ಜನು ತೋರಿಸಿದ ಸಹಕಾರಮಯವಾದ ಸಕ್ರಿಯ ಪ್ರೋತ್ಸಾಹವು ಕೂಡ ಒಂದು ರತ್ನವೇ ಸೈ, ಮೀರಾಬಾಯಿಗೆ ಈಗ ಇಂಥ ಎರಡು ರತ್ನಗಳು ದೊರಕೊಂಡವು.

ಅಜ್ಜ ರಾವದೂದಾನು ತೋರಿಸಿದ ಸಕ್ರಿಯ ಸಹಕಾರದಿಂದಾಗಿ ಮೀರಾ ಬಾಯಿಯ ಭಕ್ತಿಗೆ ಬಣ್ಣವೇರಿತು. ಪೂಜನ, ನರ್ತನ, ಭಜನಗಳು ಅವ್ಯಾಹತ ವಾಗಿ ನಡೆಯತೊಡಗಿ ಯವ್ವನದವಳಾದ ವರ್ಣ ಚಲುವಿಗೆ ರಾಣಿಯಾದ ಮೀರಾಬಾಯಿಯ ಭಕ್ತಿಯ ಪರಿಮಳವು ಮೇಡತಾದ ತುಂಬ ಪಸರಿಸಿತು. ಸಾಧುಸಂತರು, ಅಜ್ಞರು ತಜ್ಞರು, ಎಳೆಯರು ಹಳೆಯರು ತಂಡೋಪ ತಂಡವಾಗಿ ಅವಳ ದರ್ಶನಕ್ಕಾಗಿ, ಭಜನೆ ಹಾಗೂ ಪೂಜೆಯಲ್ಲಿ ಪಾಲುಗೊಳ್ಳು ವದಕ್ಕಾಗಿ ಬರತೊಡಗಿದರು.

— ೦ —

# ಮಾವನ ಮನೆಗೆ

ನೃತ್ಯ ಗಾಯನಗಳಂತೆ ಉಳಿದ ಕಲೆಗಳಲ್ಲಿ ಮೀರಾಬಾಯಿಗೆ ಶಿಕ್ಷಣವು ದೊರೆತಿತಾದರೂ ಅವಳ ಜೀವನ ಗಂಗಾಲಹರಿಯನ್ನು ಪ್ರತಿಧ್ವನಿಸಿ ಘೋಷಿಸಿ ಪ್ರಫುಲ್ಲಗೊಳಿಸಿಕೊಳ್ಳುವಲ್ಲಿ ಬಳಕೆಗೊಂಡವು; ನೃತ್ಯ ಹಾಗೂ ಸಂಗೀತಗಳಂ ಮಾತ್ರ. ನೃತ್ಯ ಮತ್ತು ಸಂಗೀತಗಳೆರಡೂ ಭಕ್ತಿಯ ದೈಹಿಕ ಮತ್ತು ಮಾನಸಿಕ ಅಭಿವ್ಯಕ್ತಿ ಮತ್ತು ಅಭಿವೃದ್ಧಿಯ ಉತ್ತಮ ಮಾಧ್ಯಮಗಳು, ಮೀರಾಬಾಯಿ ಯಿಂದ ಅವು ಮಹತ್ವವನ್ನು ಪಡೆದವು. ಮೀರಾಬಾಯಿ ಭಕ್ತಿಯ ಭಜನೆಯ ಹಾಡುಗಳಲ್ಲಿ ನೃತ್ಯದ ಲಯ ಮತ್ತು ರಾಗದ ಮಾಧುರಿಗಳೆರಡು ಪ್ರಭಾವೀ ಗುಣಗಳಿರುವುದನ್ನು ಸಾಹಿತ್ಯ ಪರಿಣತರು ಗುರುತಿಸಿದ್ದಾರೆ.

ಅವಳು ರಚಿಸಿಕೊಂಡು ಹಾಡುತ್ತಿದ್ದ ಭಜನಾ ಪದಗಳನ್ನು ಕೇಳಲು, ಆ ಭಜನೆಯಲ್ಲಿ ಪಾಲುಗೊಳ್ಳಲು ಜನ ತಂಡೋಪತಂಡವಾಗಿ ಬಂದು ಅರಮನೆ ಯನ್ನು ಸೇರುತ್ತಿದ್ದುದು ಕೆಲವು ಅರಮನೆಯ ಸಂಪ್ರದಾಯವಾದಿಗಳಿಗೆ ಕೋಪೋದ್ರೇಕವನ್ನುಂಟುಮಾಡಿದರೆ ಇನ್ನು ಕೆಲವರಲ್ಲಿ ಮೀರಾಬಾಯಿಯ ಬಗ್ಗೆ ಪೂಜ್ಯ ಭಾವವನ್ನು ಉಂಟುಮಾಡುತ್ತಿದ್ದಿತು.

ದೂದಾಜಿಯ ಮರಣದ ನಂತರ ಅವನ ಹಿರಿಯ ಮಗ ಬೀರಮದೇವನು ರಾಣಾಹುದ್ದೆಗೆ ಬಂದನು. ತಂದೆಯು ಮೀರಾಬಾಯಿಗೆ ಒದಗಿಸಿದ ಸದವಕಾಶ ಗಳಿಂದ ನಳನಳಿಸಿ ಬೆಳೆದ ಭಕ್ತಿಲತೆಗೆ ಮಾನವೀಯ ಆಶ್ರಯವನ್ನು ಬೀರಮ ದೇವ ರಾಣಾ ಒದಗಿಸುವ ವಿಚಾರದಲ್ಲಿ ಮಗ್ನನಾದನು. ಯಾಕಂದರೆ ಅರಮನೆಯ ಪರಿವಾರದ ಜನರು ಮೀರಾಬಾಯಿಯ ಯೌವ್ವನಾವಸ್ಥೆಗೆ ಬಂದರೂ ಕಾಲಲ್ಲಿ ಗೆಜ್ಜೆ ಕಟ್ಟಿಕೊಂಡು ಜನಸಮೂಹದ ಮಧ್ಯದಲ್ಲಿ ಕುಣಿ ಯುವದೇನು ಭಕ್ತಿ ? ಅದೇ ರೀತಿ ರಾಜಕುಮಾರಿಯಾಗಿ ಜನಜಂಗುಳಿಯ ಮಧ್ಯದಲ್ಲಿ ಬಾಯಿಬಿಟ್ಟು ಹಾಡಿದರೆ ಭಕ್ತಿಯೆ? ಭಕ್ತಿಯೆಂಬುದು ಅಂತರಂಗದ ರತ್ನ. ಅದನ್ನು ರಾಜಕುಮಾರಿಯಾಗಿ ಬಹಿರಂಗದಲ್ಲಿ ಬಳಸಬಾರದು, ರಾಣಿ ಯಾಗುವ ವಯಸ್ಸು. ಜವಾಬ್ದಾರಿ ಏನೇನೂ ಇಲ್ಲ. ಗಾಂಭೀರ್ಯವೂ ಇಲ್ಲ

ಎಂದು ಮಾತಾಡತೊಡಗಿದರು. ಈ ಶಬ್ದವು ಬೀರಮದೇವನ ಕಿವಿಗೂ ತಲುಪಿತು. ತಂದೆಯವರು–ದೂದಾಜಿಯವರು ಮೀರಾಬಾಯಿಯ ಭಕ್ತಿಯ ಆಚರಣೆಗೆ ಕೊಟ್ಟ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವುದು ಕಷ್ಟದಾಯಕ ವಾದಂತೆ. ಅವಳಿಂದ ರಾಜಮನೆತನದ ಗೌರವಕ್ಕೆ ಕುಂದುಬರುವುದನ್ನು ಸಹಿಸಿಕೊಳ್ಳುವದು ಇನ್ನೂ ಕಷ್ಟದ ವಿಚಾರವಾಗಿ ಬೀರಮದೇವನಿಗೆ ಕಂಡಿತು. ಚಿಕ್ಕಪ್ಪನಾದ ಬೀರಮದೇವನು ತನ್ನ ಮನೆತನದ ಗೌರವಕ್ಕೆ ಕುಂದು ಬರದಂತೆ ನೋಡಿಕೊಳ್ಳುವ ಹೊಣೆಯ ಅರಿವು ಆತನಲ್ಲಿ ಮೂಡಿದಂತೆ; ಮೀರಾ ಬಾಯಿಯ ಲಗ್ನವಾದರೆ ಅವಳ ಜೀವನದ ದೃಷ್ಟಿಕೋನದಲ್ಲಿ ಬದಲಾವಣೆಯೂ ಆಗುವದೆಂಬ ಊಹೆಯಿಂದ ಲಗ್ನದ ವಿಚಾರವನ್ನು ಗಂಭೀರವಾಗಿ ಮಾಡ ತೊಡಗಿದನು. ಮೀರಾಬಾಯಿಗೆ ಈ ವಿಚಾರವನ್ನು ಬೀರಮದೇವನು ತಿಳಿಸದೆ ಗತ್ಯಂತರವಿರಲಿಲ್ಲ. ಅವಳ ಸಖಿಯರ ಮುಖಾಂತರ ಲಗ್ನದ ವಿಚಾರವನ್ನು ಮಂಡಿಸಲಾಯಿತು. ಬಾಲ್ಯದಲ್ಲಿಯೇ ಗಿರಿಧರನಾಗರ ಶ್ಯಾಮನ ಕೂಡ ಲಗ್ನ ವಾಗಿರುವಾಗ ಬೇರೆ ಗಂಡನ ವಿಚಾರದ ಮಾತು ಬೇಡವೆಂಬುದನ್ನು ಮೀರಾ ಬಾಯಿ ತಿಳಿಸಿದಳು. "ಪೂರ್ವ ಜನಮಕೀ ಪ್ರೀತಿ ಹಮಾರೀ ಅಬ ನಹೀ ಜಾತನಿಬಾರೀ" ಎಂಬ ತನ್ನ ಹಾಗೂ ಗಿರಿಧರ ಗೋಪಾಲರ ನಡುವೆ ಇರುವ ಜನ್ಮಜನ್ಮಾಂತರದ ಪ್ರೇಮದ ಬಂಧನವನ್ನು ಸ್ಮರಿಸಿಕೊಂಡು ಅದರ ಬಂಧನ ವಿರುವಾಗ ಬೇರೊಂದು ಪ್ರೇಮಬಂಧನವನ್ನು ಬಯಸುವುದು ಅದಾವ ಜಾಣತನದ ಮಾತು ? ಎಂದು ತಿಳಿಸಿ ಹೇಳಿದಳು. ಅಜ್ಜ ದೂದಾಜಿಯನ್ನು ಮೀರಾಬಾಯಿ ಮನವೊಲಿಸಿ ತನ್ನ ದೈವಭಕ್ತಿಯ ವೈವಾಹಿಕ ಜೀವನವನ್ನು ನಡೆಸಲು ಒಪ್ಪಿಗೆಯನ್ನು ಪಡಕೊಂಡಂತೆ ಚಿಕ್ಕಪ್ಪ ಬೀರಮದೇವನಿಂದ ಒಪ್ಪಿಗೆಯನ್ನು ಪಡೆದುಕೊಳ್ಳುವುದು ದುಸ್ಸಾಧ್ಯವಾಯಿತು.

ಮೀರಾಬಾಯಿಯ ಭಕ್ತಿಯ ವಿಷಯವು ರಜಪೂತ ರಾಜಮನೆತನಗಳಲ್ಲಿ ಪಸರಿಸಿತ್ತು; ಅದೇ ರೀತಿ ಆಯಾ ರಾಜ್ಯದ ಜನರ ಮನೆಮಾತೂ ಆಗಿಬಿಟ್ಟಿತ್ತು. ಜೀವನಕ್ಕೆ ಯವ್ವನ ಬಂದಂತೆ ಮೀರಾಬಾಯಿ ಭಕ್ತಿಭಾವಕ್ಕೂ ಯವ್ವನವ ಬಂದು ಜನಕೋಟಿಯನ್ನು ಮೀರಾಬಾಯಿ ಆಕರ್ಷಿಸುತ್ತಿರುವಾಗ ಅವಳನ್ನು ಸೊಸೆಯನ್ನಾಗಿ ಮಾಡಿಕೊಳ್ಳುವ ವರನ ಮಾತಾಪಿತೃಗಳಿಗಾಗಲೀ, ಅವಳನ್ನು

ಪತ್ನಿಯನ್ನಾಗಿ ಮಾಡಿಕೊಳ್ಳಲು ನಿರ್ಧರಿಸುವ ಯುವಕನಿಗಾಗಲೀ ಎಂಟೆದೆ ಬೇಕು ಎಂಬುದು ಬೆಳಕಿನಷ್ಟು ಸ್ಪಷ್ಟ. ಚಿಕ್ಕಪ್ಪ ಬೀರಮದೇವನು ಈ ಕಷ್ಟದ ಕಾರ್ಯದಲ್ಲಿ ಕೈಹಾಕಿದರು ಮೀರಾಬಾಯಿಯ ಜೀವನ ರೂಪಿಸುವಲ್ಲಿ ಸ್ವಾತಂತ್ರ್ಯ ವಹಿಸಿದಂತೆ. ಅವನ ಪುಣ್ಯವೊ ಎಂಬಂತೆ ಮೇವಾಡದ ದೊರೆ ರಾಣಾಸಂಗ ಹಾಗೂ ಆತನ ಮಗ ಭೋಜರಾಜ ರಾಣಾ ಇಬ್ಬರೂ ಮೀರಾ ಬಾಯಿಯನ್ನು ಆಯ್ಕೆ ಮಾಡಲು ಆಲೋಚನೆಯಲ್ಲಿ ತೊಡಗಿದ್ದರು. ರಾಣಾ ಸಂಗ ಹಾಗೂ ಭೋಜರಾಜರಿಗೂ ಮೀರಾಬಾಯಿಯ ಜೀವನದ ರೀತಿಯು ಅರ್ಥವಾಗಿತ್ತು. ಅಂಥ ಸೊಸೆ ಮನೆಗೆ ಬಂದರೆ ತಮ್ಮ ಮನೆತನದ ಉದ್ಧಾರ ವಾಗುವುದರಲ್ಲಿ ಸಂದೇಹವಿಲ್ಲವೆಂಬ ಧಾರ್ಮಿಕ ಆದರ್ಶದಿಂದ ಪ್ರೇರಿತನಾದ ರಾಣಾಸಂಗನು ಮೇಡತಾದ ದೊರೆ ಬೀರಮದೇವ ರಾಣಾನೊಡನೆ ಪೂರ್ವ ಭಾವೀ ಆಲೋಚನೆಯನ್ನು ಪ್ರಾರಂಭಿಸಿದನು, ಇವರೀರ್ವರೂ ಒಪ್ಪಿದರೆ ಮುಗಿಯಿತು ಎಂಬುದು ಭಾರತೀಯ ಪರಂಪರೆಯ ಒಪ್ಪಿತ ವಿಷಯ. ಆದರೆ ಬೀರಮದೇವ ಮತ್ತು ರಾಣಾಸಂಗ ಈರ್ವರೂ ಬಹಳ ವಿಚಾರವಂತರು, ಹಾಗೂ ಸ್ವಾತಂತ್ರ ಪ್ರಿಯರು. ಅದೇ ರೀತಿ ಅವರು ವ್ಯಕ್ತಿಯ ವಿಚಾರಕ್ಕೆ ಗೌರವ ತೋರುವ ಉದಾರವಾದಿಗಳಾಗಿದ್ದರು. ಎರಡೂ ಮನೆತನಗಳ ಹಿರಿ ಯರಾದ ಇವರು ಸುಖಾಂತ ಜೀವನವು ಮೀರಾಬಾಯಿಯದಾಗಲೆಂಬ ಸದ್ಬುದ್ಧಿಯಿಂದ ಮೀರಾಬಾಯಿಯ ಮುಂದೆ ಲಗ್ನದ ವಿಚಾರವನ್ನು ಮಂಡಿ ಸಿದರು. ಅವಳ ಮನವೊಲಿಸಲು ಪ್ರಯತ್ನಿಸಿದರು. ಮೀರಾಬಾಯಿಯು ತಮ್ಮ ಮನೆಗೆ ಸೊಸೆಯಾಗಿ ಬರಬೇಕೆಂಬ ಹೆಬ್ಬಯಕೆಯು ರಾಣಾಸಂಗ ದೊರೆಯು ಅವಳ ದೊಡ್ಡಪ್ಪ ಬೀರಮ ದೇವನಕ್ಕಿಂತಲೂ ಉತ್ಕಟಭಾವದವ ನಾಗಿ ಅವಳ ಮನವೊಲಿಸುವ ಉಪಾಯಗಳನ್ನು ಬೀರಮದೇವ ರಾಣಾಗೆ ಸೂಚಿಸದಿರಲಿಲ್ಲ ಮೀರಾಬಾಯಿಗೆ ತನ್ನ ಚಿಕ್ಕಪ್ಪ ಬೀರಮದೇವ ಹಾಗೂ ತನ್ನ ಭಾವೀ ಮಾವ ರಾಣಾಸಂಗರು ಮಾಡುತ್ತಿರುವ ವಿಚಾರವು ಲೌಕಿಕ ದೃಷ್ಟಿ ಯಿಂದ ಸಾಧುವಾದುದೆಂದು ಕಂಡುಬಂದಿತು, ಸಾತ್ವಿಕ ವಿಚಾರದ ಮೀರಾ ಬಾಯಿ ಎದೆ ತಲ್ಲಣಿಸಿತು. ಲೌಕಿಕ-ವೈವಾಹಿಕ ಜೀವನವನ್ನು ನಿರಾಕರಿಸು ವದು ತನ್ನ ವಿಚಾರವಾದರೆ, ಲೌಕಿಕ-ವೈವಾಹಿಕ ಜೀವನದ ವಿಚಾರಕ್ಕೆ ಬಲ ವಾಗಿ ಅಂಟಿಕೊಳ್ಳುವುದು ದೊಡ್ಡಪ್ಪನ ಕರ್ತವ್ಯ. ಈ ಅರಿವಿನಿಂದ ಆ ವಿಚಾರ

ವನ್ನು ಅವನು ಕೃತಿಗಿಳಿಸಲು ಮಾಡಿದ ನಿರ್ಧಾರ ಎರಡೂ ಪೂರ್ವ ಪಶ್ಚಿಮ ಗಳೆಂದು ಅರಿತುಕೊಂಡ ಮೀರಾಬಾಯಿ ಮಧ್ಯಮ ಮಾರ್ಗವೊಂದನ್ನು ಸೂಚಿಸಿದಳು. ತನ್ನ ಪೂಜಾಕಾರ್ಯ, ಭಜನ ಹಾಗೂ ನೃತ್ಯ ಸೇವೆ, ಮತ್ತು ಸಾಧುಸಜ್ಜನರ ಸತ್ಸಂಗದಲ್ಲಿ ಶ್ಯಾಮನ ಸ್ಮರಣ ನಾಮಸಂಕೀರ್ತನಗಳು ನಿತ್ಯ ನಡೆಯಬೇಕು. ಅದಕ್ಕಾಗಿ ತನ್ನ ಅಜ್ಜ ದೂದಾಜಿಮಾಡಿಕೊಟ್ಟಂತೆ ಎಲ್ಲ ಸೌಲಭ್ಯಗಳು ಲಭ್ಯವಾದರೆ ಮಾತ್ರ ಮದುವೆಗೆ ಒಪ್ಪುವೆ ಎಂಬ ವಿಚಾರವನ್ನು ತಿಳಿಸಿದಳು.

ಮೀರಾಬಾಯಿಯ ಬದುಕಿನ ರೀತಿ ನೀತಿಗಳನ್ನು ಅರಿತ ರಾಣಾಸಂಗ ಹಾಗೂ ಅವನ ಮಗ ಭೋಜರಾಜ ರಾಣಾ ಸಂತೋಷದಿಂದ ಒಪ್ಪಿಕೊಂಡೇ ವಿಚಾರ ವಿನಿಮಯದಲ್ಲಿ ತೊಡಗಿದುದರಿಂದ ಅವಳ ಕರಾರುಗಳಿಗೆ ಒಪ್ಪುವ ದೇನು ಕಠಿಣವೆಂದು ಅನಿಸಲಿಲ್ಲ. ಬೀರಮದೇವ ಮತ್ತು ರಾಣಾಸಂಗರೀರ್ವ ರಿಗೂ ತುಂಬಾ ಸಂತೋಷವಾಯಿತು. ಮದುವೆಯ ಸಿದ್ಧತೆಗಳು ನಡೆದವು. ಮಹಾರಾಣಿಯಾಗುವಂಥ ಸನ್ನಿವೇಶದಿಂದ ಮೀರಾಬಾಯಿಗೆ ಆನಂದವೇನು ವಿಶೇಷವಾಗದಿದ್ದರೂ ಚಿಕ್ಕಪ್ಪನಾದ ಬೀರಮದೇವನು ಎದುರಿಸುತ್ತಿದ್ದ ಸಮ ಸ್ಯೆಯು ಪರಿಹಾರವಾದುದುದರಿಂದ ಆತನ ಮುಖದ ಮೇಲೆ ನಲಿದಾಡುವ ಗೆಲುವಿನ ಲಾಸ್ಯದಿಂದ ಶಾಂತಚಿತ್ತಳಾಗಿದ್ದಳು. ಮದುಮಗಳಾಗಿ ವಸ್ತು ಒಡವೆ ಬಟ್ಟೆಬರೆಗಳ ಸಿದ್ಧತೆಯಲ್ಲಿರುವುದು, ಆ ಸಿದ್ಧತೆಯಲ್ಲಿ ಬಂಧುಬಳಗದವರು ತೋರುವ ಉತ್ಸಾಹದಲ್ಲಿ ತಾನೂ ಪಾಲುಗೊಳ್ಳುವದೂ ಜನಸಾಮಾನ್ಯರ ಬದುಕಿನ ರೀತಿ. ಬೀರಮದೇವನ ಅರಮನೆಯಲ್ಲಿ ಎಲ್ಲರೂ ಮದುವೆಯ ಉತ್ಸವದ ಸಿದ್ಧತೆಯ ಉತ್ಸಾಹದಲ್ಲಿದ್ದುದು ಮೀರಾಬಾಯಿಗೂ ಗೊತ್ತು. ಅವಳು ಭಾವೀ ಪತಿಯ ಗೃಹದಲ್ಲಿ ತನ್ನ ಪ್ರಿಯತಮ ಗಿರಿಧರಗೋಪಾಲನ ವಾಸವೆಲ್ಲಿ, ಸರಿಯಾದ ಪೂಜಾ, ಭಜನ, ಸಂತ ಹಾಗೂ ಸಾಧುಗಳ ಸತ್ಸಂಗದ ಅನುಕೂಲತೆಗಳು ಎಲ್ಲಿ ಎಂಬ ವಿಚಾರದಲ್ಲಿ ಮಗ್ನ. ಮದುವೆಗೆ ಬೇಕಾದ ಬಟ್ಟೆಬರೆ ವಸ್ತು ಒಡವೆಗಳನ್ನು ಇನ್ನುಳಿದ ವಸ್ತುಗಳನ್ನು ಚಿಕ್ಕಪ್ಪನಾಡ ಬೀರಮದೇವ ರಾಣಾ ಹಾಗೂ ಆತನ ಪರಿವಾರದವರು ತೆಗೆದುಕೊಂಡರೆ, ಮೀರಾಬಾಯಿ ರೈದಾಸನಿಂದ ಕಾಡಿಬೇಡಿ ಪಡೆದ ತನ್ನ ಇನಿಯ ಬಾಲ

ಗೋಪಾಲನ ಚಿಕ್ಕ ಮೂರ್ತಿಯನ್ನು ಬಹಳ ಎಚ್ಚರದಿಂದ ಜೊತೆಯಲ್ಲಿ ತೆಗೆದು ಕೊಂಡಳು. ಮದುಮಗ ಭೋಜರಾಜನ ಜೊತೆಯಲ್ಲಿ ಕೂತು ಮಂಗಲಾಕ್ಷತೆ ಯನ್ನು ಹಾಕಿಕೊಳ್ಳುವ ವೇಳೆಯಲ್ಲಿ ಕೂಡ ಗಿರಧರಗೋಪಾಲನ ಚಿಕ್ಕ ಮೂರ್ತಿಯನ್ನು ಅವಳು ಹಾಸಕ್ಕಿಯ ಹಸಿಯ ಹಾಸಂಗೆಯ ಮೇಲೆಯೆ ಇಟ್ಟುಕೊಂಡಿದ್ದಳು. ಜೊತೆಯಲ್ಲಿ ಕೂತುಕೊಂಡ ಭೋಜರಾಜನಿಗೆ ಈ ಮುಗ್ಧ ಕೃಷ್ಣ ಭಕ್ತಳ ಮೇಲೆ ತುಂಬಾ ಕರುಣೆಯುಂಟಾಗಿದ್ದರೆ, ನೆಗೆವಣ್ಣಿ ಯರು, ಇತರೆ ಬಂಧುಬಳಗದವರು ಇದು ಅವ್ಯವಹಾರದ ಪರಮಾವಧಿ ಯೆಂದು ಮನದಲ್ಲಿ ಸಿಡಿಮಿಡಿಗೊಂಡಿದ್ದರೆ ಅದೇನಚ್ಚರಿಯಲ್ಲ. 1516ರಲ್ಲಿ ಮಂಗಲಾಕ್ಷತಾರ್ಪಣವಾಯಿತು. ಮೀರಾಬಾಯಿ ಈಗ ಪಟ್ಟದ ರಾಣಿ.

ಅಚ್ಚುಮೆಚ್ಚಿನ ಸೊಸೆ ಮೀರಾಬಾಯಿಯನ್ನು ಮನೆಗೆ ಬರಮಾಡಿ ಕೊಂಡ ರಾಣಾಸಿಂಗನು ತಾನು ಕೊಟ್ಟ ವಚನಕ್ಕನುಗುಣವಾಗಿ ಮೀರಾ ಬಾಯಿಯ ಭಕ್ತಿಯ ಬದುಕು ಸುಗಮವಾಗಿ ನಡೆಯಲೋಸುಗ ಎಲ್ಲ ಸೌಕರ್ಯಗಳನ್ನು ಒದಗಿಸಿಕೊಟ್ಟನು. ನವದಂಪತಿಗಳು ಅಚ್ಚುಮೆಚ್ಚಿನಿಂದ ರಲು ಬೇಕಾದ ಸಹಕಾರಕ್ಕನುಗುಣವಾಗಿ ಪತಿ ಭೋಜರಾಜ ರಾಣಾನು ಮೀರಾಬಾಯಿಯ ಪೂಜೆ, ಭಜನ, ನೃತ್ಯ, ಸಾಧುಸಂತರ ಸತ್ಸಂಗಳಿಗೆ ತನ್ನ ಸಹೃದಯತೆಯ ಸಹಕಾರವನ್ನು ಸ್ವಯಂಸ್ಫೂರ್ತಿಯಿಂದ ನೀಡಿದನು. ಅವಳ ಈ ಧಾರ್ಮಿಕ ಜೀವನದಿಂದ ತನ್ನ ಕುಲೋದ್ಧಾರವೆಂದು ಮಾವನ ಹಾಗೂ ಗಂಡನ ನಂಬುಗೆ. ಮಹಾರಾಣಿಯಾದ ಮೀರಾಬಾಯಿಯ ಪೂಜೆ, ಭಜನ, ನೃತ್ಯ ಹಾಗೂ ಸತ್ಸಂಗಗಳು ಅವ್ಯಾಹತವಾಗಿ ನಡಯಲು ಅರಮನೆಯ ಅವರಣದಲ್ಲಿ ಮಂದಿರ ವೊಂದು ಹೊಸದಾಗಿ ತಲೆಯತ್ತಿತು. ಇಂದಿಗೂ ಅದು ಮೀರಾಮಂದಿರವೆಂದು ಸುಪ್ರಸಿದ್ಧ. ಅವಳ ಜೊತೆಯಲ್ಲಿಯೇ ಬಂದ ಅವಳ ಬ್ಯಾಲದ ದಾಸಿ ಲಲಿತಾ ಕೂಡ ಆ ನಿತ್ಯದ ಧಾರ್ಮಿಕ ಆಚರಣೆಯಲ್ಲಿ ಪಾಲುಗಾರಳಾಗಿ ಅವಳ ನೆಳಲಿನಂತೆಯೇ ಇದ್ದಳು. ಮೀರಾ ಬಾಯಿಯ ನಿತ್ಯದ ಕಾರ್ಯಕ್ರಮಗಳನ್ನು ಮಾವರಾಣಾಸಂಗ ಹಾಗೂ ಪತಿ ಭೋಜರಾಜ ರಾಣಾ ಅವರು ಅತ್ಯಂತ ಆದರ ಹಾಗೂ ಪ್ರೀತಿಯಿಂದ ನೋಡಿ ಸಂತೋಷಪಡುತ್ತಿದ್ದರು, ಅದರಂತೆ—ಅವಳನಾದನಿ ಉದಾಬಾಯಿಗೆ

ಮೀರಾಬಾಯಿಮೇಲೆ ಪ್ರೀತಿ. ಬರಬರುತ್ತ ಪರಿವಾರದವರಲ್ಲಿ ಹಾಗೂ ನೆರಹೊರೆಯ ಜನಸಮುದಾಯದಲ್ಲಿ ರಾಣಿಯಾಗಿ ಜನಸಾಮಾನ್ಯ ರೊಡನೆ, ಅಪರಿಚಿತ ಸಾಧುಸಂತರ ವೇಷದಲ್ಲಿರುವವರ ಮಧ್ಯದಲ್ಲಿ ಭಜನೆ, ನ ತ್ಯ ಸಂಭಾಷಣೆಗಳಲ್ಲಿ ಇಡೀ ದಿನವನ್ನು ಕಳೆಯುವದು ಅಸಂತೃಪ್ತಿಯನ್ನು ಹೆಚ್ಚಿಸತೊಡಗಿತು. ಈ ಅಸಂತೃಪ್ತ ಜನರು ಭಕ್ತ ಮೀರಬಾಯಿಯನ್ನು ಕುರಿತು ಲಘುವಾಗಿ ಮಾತಾನಾಡತೊಡಗಿದರು. ದೊರೆ ರಾಣಾಸಿಂಗ್ ಹಾಗೂ ಯುವರಾಜ ಭೋಜರಾಜರ ಕಿವಿಗೂ ಆ ಮಾತುಗಳು ತಲುಪಿದವು. ಆಗ ಅವರೀರ್ವರಿಗೂ ಸಹಿಸಲು ಸಾಧ್ಯವಾಗಲಿಲ್ಲ. ಭಕ್ತ ಮೀರಾಬಾಯಿಯನ್ನು ಕುರಿತು ಯಾರಾದರೂ ಅವಹೇಳನದ ಇಲ್ಲವೆ ಅಲ್ಲದ ಸಲ್ಲದ ಮಾತುಗಳನ್ನಾಡಿ ದರೆ ಕಠೋರ ಶಿಕ್ಷೆಯನ್ನು ವಿಧಿಸಲಾಗುವದೆಂಬ ರಾಜಾಜ್ಞೆಯನ್ನು ಹೊರಡಿಸಿದರು.

ಮೀರಾಬಾಯಿಯು ನಿರ್ಭೀತಳಾದ ದೈವಭಕ್ತಳು. ಅವಳು ಲೋಕ ವಿರೋಧಿ. ಅದೇ ವೇಳೆಗೆ, ಆದರ, ಲೋಕದ ಭಕ್ತರ ಭಕ್ತಳು. ಯಾವ ಸ್ತುತಿ ನಿಂದೆಗಳಿಗೂ ಜಗ್ಗುವವಳಲ್ಲ. ಸ್ವತಃ ಅತ್ತೆಯಾದವಳು ಮೀರಾ ಬಾಯಿಯು ಸಾಧುಸಜ್ಜನರ ಜೊತೆಗೆ ಸೇರಿಭಕ್ತಿ ಸಂಭಾಷಣೆಯಲ್ಲಿರುವದನ್ನೂ, ಕಾಲಿಗೆ ಗೆಜ್ಜೆಯನ್ನು ಕಟ್ಟಿಕೊಂಡು ಆ ಅಪರಿಚಿತ ಸಾಮಾನ್ಯ ಜನಜಂಗುಳಿ ಮಧ್ಯದಲ್ಲಿ ಕುಣಿದು ಹಾಡುವುದನ್ನೂ ಕಂಡು ಕೆಂಡವಾಗಿ ಕಂಗೆಟ್ಟು ಮೀರಿ ಬಾಯಿಯನ್ನು ಕುಲೋದ್ಧಾರಕಳಾಗುವದರ ಬದಲು ಕುಲನಾಶಕಳಾದಳೆಂದು ಟೀಕಿಸುತ್ತಿದ್ದಳು. "ಸಾಸ ಕಹೆ ಕುಲ ನಾಶಿರೇ" ಎಂದು ಮೀರಾಬಾಯಿ ಹೇಳುವುದು ಇದಕ್ಕೆ ಸಾಕ್ಷಿ. ಇದನ್ನೆಲ್ಲ ಕೇಳಿ ಕೇಳಿ ಅವಳಿಗೆ ಬೇಜಾರವಾಗಿರ ಲಿಲ್ಲ; ಅವಳು ಧೈರ್ಯಗುಂದಿರಲಿಲ್ಲ.

## ಕ್ರೂರ ರತನ ರಾಣಾ ಹಾಗೂ ವಿಕ್ರಮ ರಾಣಾಗಳು

ದಾಂಪತ್ಯ ಜೀವನ ಹಾಗೂ ಭಕ್ತಿ ಜೀವನದ ಮಧುರ ಮಿಲನದ ಕೇವಲ ಹತ್ತು ವರ್ಷಗಳನ್ನು ಅವಳು ಕಳೆಯುವಷ್ಟರಲ್ಲಿ ಭೋಜರಾಜ ರಾಣಾ ಯುದ್ಧವೊಂದರಲ್ಲಿ ರಣಭೂಮಿಯಲ್ಲಿಯೇ ವೀರಸ್ವರ್ಗವನ್ನಪ್ಪಿದ. ಪತಿ ಭೋಜರಾಜನು ವೀರಸ್ವರ್ಗವನ್ನು ಸೇರಿದ ಸಂಗತಿಯು ತಿಳಿಯುತ್ತಲೆ ಅವನ ತಾಯಿಯಾದ ವೀರಾಬಾಯಿಯ ಅತ್ತೆಯು ಮೀರಾಬಾಯಿಯು ಸಹಗಮನ ಹೋಗಬೇಕೆಂದು ಬಗೆದು ಸಕಲ ಸಿದ್ಧತೆಗಳನ್ನು ನಡಿಸಿದಳು, ಅಗ್ನಿಕಂಡವು ಸಿದ್ಧವಾಯಿತು. ಮೀರಾಬಾಯಿಗೆ ಸಕಲ ವಸ್ತ್ರಗಳನ್ನು, ಅಂದ ಚಂದವಾದ ಬೆಲೆಯುಳ್ಳ ಆಭರಣಗಳನ್ನು ಧರಿಸಿಕೊಂಡು ಪತಿಯು ಸೇರಿದ ವೀರಸ್ವರ್ಗವನ್ನು ಸೇರುವದು ರಜಪೂತ ವೀರರಾಣಿಯರ ಧಾರ್ಮಿಕ ಸಂಪ್ರದಾಯದಂತೆ ಸತಿ ಹೋಗಬೇಕು ಎಂದು ಹೇಳಿ ಕಳುಹಿಸಿದಳು. ಆ ಮಾತಿಗೆ ಮೀರಾಬಾಯಿ ಕಿವಿಗೊಡಲಿಲ್ಲ. ತಾನು ಮೆಚ್ಚಿದ ಗಿರಿಧರ ಗೋಪಾಲನು ಅಮೃತಪುತ್ರ. ಅವನಿಗೆ ಸಾವಿಲ್ಲ. ಅವನು ತನ್ನ ಹೃದಯದಲ್ಲಿದ್ದಾನೆ. ಕಾರಣ ತಾನು ಸತಿ ಹೋಗಲಾರೆ ಎಂದು ಹೇಳಿ ಕಳುಹಿಸಿದಳು, ಸತಿ ಹೋಗುವ ವೀರ ಪರಂಪರೆಗೆ ಅವಮಾನ ಮಾಡಿದಳೆಂದು ಅತ್ತೆಗೆ ತುಂಬಾ ಕೋಪ ಬಂದಿತು. ಆದರೆ ಅದನ್ನು ಕಾರ್ಯಾಚರಣೆಯಲ್ಲಿ ತರುವುದಕ್ಕೆ ಒತ್ತಾಯಿಸುವದು ನಡೆದ ಸಂಗತಿಯನ್ನು ಭೋಜರಾಜನ ತಂಗಿ ಉದ್ದಾಬಾಯಿ ತಮ್ಮ ತಂದೆ ರಾಣಾಸಂಗನಿಗೆ ಹೇಳಿದಳು. ಮೀರಾಬಾಯಿಯ ಮಾಮತೆಯ ಮಾವ ರಾಣಾಸಂಗ ಸತಿ ಹೋಗುವದನ್ನು ವಿರೋಧಿಸಿ ಮೀರಾಬಾಯಿಯ ವಿಚಾರವನ್ನು ಎತ್ತಿಹಿಡಿದ. ಒತ್ತಾಯದಿಂದ ಸತಿ ಹೋಗುವದೆಲ್ಲಿಯ ಮಾತು ? ಸ್ವಸಂತೋಷದಿಂದ ರಾಣಿಯು ಸತಿ ಹೋಗುವದು ಧರ್ಮ ಸಮ್ಮತವಾದುದು. ಮೀರಾಬಾಯಿಯನ್ನು ಯಾರೂ ಒತ್ತಾಯದಿಂದ ಸಹಗಮನ ಮಾಡಿಸಲಾಗದು ಎಂದು ಹೇಳಿದನಲ್ಲದೆ, ಆ ವಿಚಾರವನ್ನು ಯಾರೇ ಮಾಡಿ ಅವಳನ್ನು ಪೀಡಿಸಿದರೆ ಅವರನ್ನು ಕ್ಷಮಿಸಲಾರೆ ಎಂದು ರಾಣಿ ವಾಸದಲ್ಲಿ ಗದ್ದರಿಸಿದನು. ಬಲಿಗೆ ತಂದ ಪಶುವಿನಾವಸ್ಥೆಯಲ್ಲಿದ್ದ ಮೀರಾ

ಬಾಯಿಯ ತಲೆಯ ಮೇಲೆ ಕೈಯಾಡಿಸಿ ಸಾಂತ್ವನದ ಮಾತನಾಡಿದನು. ಮೀರಾಬಾಯಿಯು ಮಾವ ರಾಣಾಸಂಗನ ಚರಣಕಮಲಗಳ ಮೇಲೆ ಬಿದ್ದಳು. ಮಾವನಿಂದ ತನ್ನ ಪತಿ ಶ್ಯಾಮನ ಸೇವೆಯ ಅವಕಾಶದೊಡನೆ ಅವಳಿಗೆ ಪುನರ್ಜನ್ಮವೂ ಲಭಿಸಿದಂತಾಯಿತು. ಅವಳ ಮಾವ ರಾಣಾಸಂಗನೂ ಬಹಳ ದಿವಸ ಬದುಕಿರಲಿಲ್ಲ. ಇವರಿಬ್ಬರ ನಿರ್ಗಮನದಿಂದ ಮೀರಾಬಾಯಿಯ ಜೀವನದಲ್ಲಿ ರಾಜ ರಕ್ಷಣೆ ಇಲ್ಲದಂತಾಯಿತು. ಭೋಜರಾಜ ರಾಣಾನ ನಂತರ, ಆತನ ಸಹೋದರ ವಿಕ್ರಮಾದಿತ್ಯನು ರಾಣಾ ಹುದ್ದೆಯನ್ನು ಅಲಂಕರಿಸಿದನು. ಇವನು ತಾಯಿ, ಬಂಧುಬಳಗಗಳ ಅಭಿಪ್ರಾಯಕ್ಕೆ ಗೌರವವನ್ನು ಕೊಡುತ್ತಿದ್ದನು. ಮೀರಾಬಾಯಿಯು ನಡೆಸಿಕೊಂಡು ಬಂದ ಭಕ್ತಿ ಜೀವನದ ರೀತಿ ನೀತಿಗಳು ವಿಕ್ರಮಾದಿತ್ಯ ರಾಣಾನಿಗೆ ಮೊದಲಿನಿಂದಲೂ ಸರಿ ಬಂದಿರಲಿಲ್ಲ. ಒಳಗೊಳಗೇ ವಿರೋಧಿಸುತ್ತಿದ್ದ ಇವನಿಗೆ ಅಧಿಕಾರದ ಬೆಂಬಲ, ತಾಯಿಯ ಬೆಂಬಲ ದೊರೆತುದರಿಂದ ನಿರ್ಭೀತನಾಗಿ ರಾಜಮನೆತನದವರ ಟೊಳ್ಳು ಆಚರಣೆಗಳನ್ನು ಎತ್ತಿಹಿಡಿಯುವವರನ್ನು ಅನುಸರಿಸಿ ಮೀರಾಬಾಯಿಯನ್ನು ಪೀಡಿಸಲು ಪ್ರಾರಂಭಿಸಿದನು. ಜನಾನುರಾಗವನ್ನು ಪಡೆದ ಮೀರಾಬಾಯಿ ತಮ್ಮ ವಿರುದ್ಧ ಏನನ್ನಾದರೂ ಆಡಿದರೆ ತಮ್ಮ ರಾಜಗದ್ದುಗೆ ಅಲ್ಲಾಡುವದೆಂಬ ಭೀತಿಯೂ ಇದ್ದಂತೆ ಕಂಡುಬರುತ್ತದೆ. ಅದನ್ನು ರಾಜಮನೆತನದ ಗೌರವ ಕಾಪಾಡುವ ಹೆಸರಿನಲ್ಲಿ ಮುಂದಿಗೆ ತೋರಗೊಡುತ್ತಿದ್ದಿಲ್ಲವೆಂಬುದೂ ಒಂದು ಅಭಿಪ್ರಾಯವಿದೆ. ಮೀರಾಬಾಯಿಯ ಲಕ್ಷ್ಯವು ಆ ಕಡೆಗೆ ಎಂದೂ ಇದ್ದಿರಲಿಲ್ಲವಷ್ಟೇ ಅಲ್ಲ, ಅದು ಅವಳ ಜಾಯಮಾನಕ್ಕೆ ಸಲ್ಲದ ವಿಷಯ. ಆದರೇನು ಸ್ವಾರ್ಥಿಗಳು ತಮ್ಮ ವಿಚಾರ ಪೋಷಣೆಗೆ ನಾನಾ ವಿಧವಾದ ಆಲೋಚನೆಗಳನ್ನು ಮಾಡಿದರೆಂಬುದು ಸ್ಪಷ್ಟ ವಿರುತ್ತದೆ. ಪಟ್ಟದ ರಾಣಿಯಾಗಿ ಜನಸಾಮಾನ್ಯರ ಜೊತೆ ಬೆರೆಯಲಾಗದೆಂಬ ದೊಡ್ಡ ಗುಲ್ಲನ್ನು ಎಬ್ಬಿಸಿ ಅವಳನ್ನು ಪೀಡಿಸಿದರೆಂಬುದನ್ನು ಮೀರಾಬಾಯಿ ತನ್ನ ಹಾಡಿನಲ್ಲಿ ತಿಳಿಸಿದ್ದಾಳೆ :

"ಮೇರೆ ತೋ ಗಿರಿಧರ ಗೋಪಾಲ ದೂಸರಾ ನ ಕೋಯೀ
ಜಾಕೆ ಸಿರ ಮೋರ ಮುಕುಟ ಮೇರೆ ಪತಿ ಸೋಯೀ ॥

ಜಾಂಡಿ ದಯೀ ಕುಲಕೀ ಕಾನಿ ಕಹಾಕರಿ ಹೈ ಕೋಯೀ
ಸಂತನ ಢಿಗ ಬೈಠಿ ಬೈಠಿ ಲೋಕ ಲಾಜ ಖೋಯೀ ||"

(ನನ್ನ ಗಂಡ ಗಿರಿಧರಗೋಪಾಲನು. ಅವನನ್ನು ಬಿಟ್ಟು ನನಗೆ ಯಾರೂ ಇಲ್ಲ. ಅವನಿಗಾಗಿ ನಾನು ಕುಲಮರ್ಯಾದೆ, ಸಮಾಜ ಮರ್ಯಾದೆ ಎಲ್ಲವನ್ನೂ ತೊರೆದಿದ್ದೇನೆ. ಸಾಧುಗಳ ಜೊತೆಯಲ್ಲಿ ಕೂತುಕೊಂಡು ಲಜ್ಜೆಯಿಲ್ಲದವಳಾಗಿದ್ದೇನೆ. ನನಗೆ ಲೋಕದ ಜನರಾರು ಏನು ಮಾಡಬಲ್ಲರು ?) ಎಂದು ನಿರ್ಭೀತಿಯಿಂದ ಕೇಳುತ್ತಾಳೆ.

ಅವಳ ಧೀರೋದಾತ್ತವಾದ ಜೀವನದ ರೀತಿಯನ್ನು ಕಂಡು ಹಿಗ್ಗುವ ಬದಲು ರಾಣಾಗೆ, ಅವಳ ಅತ್ತೆ ಹಾಗೂ ಇತರ ಬಂಧುಬಳಗದವರಿಗೆ ಎಲ್ಲಿಲ್ಲದ ಕ್ರೋಧ. ಏಕೆಂದರೆ ಭಕ್ತರಲ್ಲಿ ತುಂಬಿದ ನಿರಹಂಕಾರವು ಅವರಲ್ಲಿರುವುದು ಸಾಧ್ಯವೆ ? ಅವರೆಲ್ಲರಿಗೆ ಅಹಂಕಾರವು ಅಂತರಂಗ ಮತ್ತು ಬಹಿರಂಗಗಳಲ್ಲಿ ತುಂಬಿಕೊಂಡು ಅವರೆಲ್ಲರೂ ಧೃತರಾಷ್ಟ್ರರೇ ಆಗಿದ್ದರು. ನಿರಹಂಕಾರಳಾಗಿ ಭಕ್ತಿಭಾವದಿಂದ ವರ್ತಿಸುತ್ತಿದ್ದ ಅವಳ ಸದಾಚಾರವೆಲ್ಲ ದುರಭಿಮಾನದಿಂದ ಬೀಗಿದ ಅವರಿಗೆ ದುರಾಚಾರವಾಗಿ ಕಂಡಿದ್ದರೆ ಆಶ್ಚರಿಯಲ್ಲ. ದುರಹಂಕಾರಿಗಳಾದ ಅವಳ ಮೈದುನ ರತನ ರಾಣಾನಾಗಲಿ, ವಿಕ್ರಮಾದಿತ್ಯ ರಾಣಾನಾಗಲಿ ಅರಮನೆಯ ಪರಿವಾರದವರ ಜೊತೆಯಲ್ಲಿ ಸೇರಿಕೊಂಡು ಮೀರಾಬಾಯಿಯನ್ನು ಪೀಡಿಸುವ ದುರಾಲೋಚನೆಯಲ್ಲಿಯೇ ನಿರತರಾದರು. ಅವರ ರೋಷಾವೇಶವು ಮೀರಾಬಾಯಿಯವರಿಗೆ ಬಂದು ತಲುಪಿತ್ತು. ಅಂಥ ಕ್ಷುದ್ರ ದುರಾಲೋಚನೆಗಳ ದೊರೆಗಳಿಗೆ ಅವಳೆಂದಿಗೂ ಅಂಜಲಿಲ್ಲ. ಅವರು ಗೈದ ಪ್ರಾಣಾಂತಿಕ ಸವಾಲುಗಳನ್ನೆಲ್ಲ ಅತ್ಯಂತ ಧೈರ್ಯದಿಂದ ಬಹಿರಂಗವಾಗಿ ತನ್ನ ಭಜನಾ ಹಾಡುಗಳ ಮುಖಾಂತರ ಗಿರಿಧರಗೋಪಾಲ ಹಾಗೂ ಸಜ್ಜನರ ಮುಂದೆ ತಿಳಿಸಿಬಿಡುತ್ತಿದ್ದಳು :

"ನಿಸೋದ್ಯಾ ರೋತ್ಕ ತೋ ವ್ಯಾರೋ ಕಾಯಿ ಕರಲೇಸಿ ।
ಮೈತೋ ಗುಣ ಗೋವಿಂದಕಾ ಗಾಂಸೂ ಹೋ ಮ್ಹಾಯಿ ||"

(ರಾಣಾ ಸಿಟ್ಟಿಗೆದ್ದರೆ ಸನ್ನನ್ನೇನು ಮಾಡುವನು ? ನಾನು ಮಾತ್ರ ಗುರು ಗೋವಿಂದನ ಗುಣಗಾನವನ್ನು ಮಾಡುವೆ.) ರಾಜಾಧಿರಾಜನಾದ ಗಿರಿಧರ ಗೋಪಾಲನ ರಾಜತೇಜದಲ್ಲಿಪ್ಪ ಭಕ್ತರಾರಿಗೂ ಭಯಪಡವವರಲ್ಲ. ಅವರು ಸತ್ಯಾಗ್ರಹಿಗಳು. ದುರಾಗ್ರಹಿಗಳು ಕುತಂತ್ರಗಳಿಂದವರನ್ನು ಕಂಗೆಡಿಸಲಾರರು.

— —

# ಸಿಂಹದ ಭಕ್ತಿ

ಸಾಧು ಸಂತರಿಗೆ ದೇವರ ನೆನಹು, ಸೇವೆ, ಭಜನೆ ಹಾಗೂ ದೇವರ ಲೀಲೆಗಳ ಸಂಪಾದನೆಯಲ್ಲದೆ, ಮತ್ತೊಂದು ವಿಚಾರವು ಹೊಳೆಯಲಾರದು. "ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ, ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ, ಮತ್ತೊಂದು ಕೇಳದಂತೆ ಕಿವುಡನ ಮಾಡಯ್ಯ ತಂದೆ" ಎಂದು ದೇವರನ್ನು ಪ್ರಾರ್ಥಿಸಿ ಇಂದ್ರಿಯ ಗಳಿಗೆ ಎಳಸದಂತೆ ನೋಡಿಕೊಳ್ಳುವರು. ನೋಡಬೇಕಾದರೆ ದೇವನ ಶ್ರೀ ಮೂರ್ತಿಯನ್ನೇ ನೋಡಬೇಕು, ಕೇಳುವವಾದರೆ ದೇವನ ಶ್ರೀಚರಿತ್ರೆಯನ್ನೇ ಕೇಳಬೇಕು, ಮಾತನಾಡುವದಾದರೆ ಮಾತೆಲ್ಲ ಶ್ರೀನಾಮವಲ್ಲದಿನ್ನೊಂದಿರ ಬಾರದು ಎಂಬುದನ್ನು ದೇವರಲ್ಲಿ ಭಗವದ್ಭಕ್ತರು ಬೇಡಿಕೊಳ್ಳುತ್ತ ಸಿದ್ಧಿಗಾಗಿ ತಪಿಸುವರು. ದುರುಳರಾದ ರತನ ರಾಣಾ ಆಗಲಿ, ವಿಕ್ರಮಾದಿತ್ಯ ರಾಣಾ ಆಗಲಿ ಇಂಥವನ್ನೆಂದೂ ಅರಿಯದ ಅವರು ಭಕ್ತ ಮೀರಾಬಾಯಿಯನ್ನು ನಾನಾ ರೀತಿಯಿಂದ ತೊಂದರೆಗೊಳಿಸುವದೇಕೆ, ಜನಾಪವಾದವು ಬರದಂತೆ ಅವಳ ಸಾವಿನ ಉಪಾಯಗಳನ್ನು ಹುಡುಕುವದರಲ್ಲಿ ನಿರತರಾಗಿದ್ದರು. ರತನ ರಾಣಾನ ನಂತರ ಪಟ್ಟಕ್ಕೆ ಬಂದ ವಿಕ್ರಮಾದಿತ್ಯನು ಅನೇಕ ತಂತ್ರಗಳನ್ನು ಕೈಕೊಂಡನು. ಇವುಗಳಲ್ಲಿ ಹಲವು ಕಿವಿಯಿಂದ ಕಿವಿಗೆ ಬಂದರೆ, ಇನ್ನು ಕೆಲವು ಮೀರಾಬಾಯಿಯ ಹಾಡಿನಲ್ಲಿ ಉಲ್ಲೇಖನಗೊಂಡಿರುತ್ತವೆ.

ಮೀರಾಬಾಯಿಯನ್ನು ಸಿಂಹಕ್ಕೆ ಆಹುತಿಯನ್ನಾಗಿ ಕೊಡುವ ವಿಚಾರವು ಅಂಥ ಕಥೆಗಳಲ್ಲಿ ಒಂದು. ವಿಕ್ರಮಾದಿತ್ಯ ರಾಣಾನು ರಾಜಕೀಯ ಸತ್ತೆಯ ವಿರುದ್ಧ ಸಾಧು, ಸನ್ಯಾಸಿಗಳು ಕೆಲಸ ಮಾಡುವರು ಎಂಬ ಸಂಶಯವುಳ್ಳವ ನೆಂದು ರಾಜಕೀಯ ಚರಿತ್ರಕಾರರ ಅಭಿಪ್ರಾಯವು ಇದ್ದುದನ್ನು ಚಿತ್ತೂರಿನ ಚರಿತ್ರೆಯ ಅಧ್ಯಯನ ಮಾಡಿದವರು ತಿಳಿಸುತ್ತಾರೆ. ಈ ಹಿನ್ನೆಲೆಯಲ್ಲಿ ಮೀರಾಬಾಯಿಯನ್ನು ಕೊಲ್ಲುವ ಅನೇಕ ತಂತ್ರಗಳಲ್ಲಿ ಸಿಂಹಕ್ಕೆ ಬಲಿಕೊಡುವ ಒಂದು ಘಟನೆಯು ನಡೆದರೂ ನಡೆದಿರಬಹುದು. ಎಂಡ್ರೋಕ್ಲೀಜನು ಸಿಂಹದ ಕೈಲಿ ಬದುಕಿ ಉಳಿದಂತೆ ಮೀರಾಬಾಯಿಯು ಬದುಕಿ ಉಳದಿದ್ದರೆ

ಧಾರ್ಮಿಕ ಭಾವನೆಯ ಹಿನ್ನೆಲೆಯಲ್ಲಿ ಅದು ಒಂದು ಧಾರ್ಮಿಕ ಭಾವನೆ ಘೋಷಣೆಗೆ ಆಧಾರವಾಗಿರಲೂಬಹುದು.

ವಿಕ್ರಮಾದಿತ್ಯ ರಾಣಾನ ಮೃಗಾಲಯದಲ್ಲಿ ಒಂದು ಸಿಂಹವು ಇತ್ತು; ಅದು ಗಿರಿನಾರ ಬೆಟ್ಟದ ಸುಪ್ರಸಿದ್ಧ ಜಾತಿಗೆ ಸೇರಿದ ಸಿಂಹವೇ ಅಹುದು. ಆ ಸಿಂಹವನ್ನು ಎರಡು ಮೂರು ದಿನಗಳವರೆಗೆ ಆಹಾರವನ್ನು ಕೊಡದೆ ಇಡಲಾಗಿತ್ತು. ಆ ಹಸಿದ ಸಿಂಹ ಇದ್ದ ಪಂಜರದಲ್ಲಿ ಮೀರಾಬಾಯಿಗೆ ಸಿಂಹ ರೂಪದಲ್ಲಿ ಗಿರಿಧರ ಗೋಪಾಲನು ದರ್ಶನವನ್ನು ಕೊಡುವನು. ಆದಕಾರಣ ಅವಳು ಆ ಪಂಜರದಲ್ಲಿ ತನ್ನ ಶ್ಯಾಮನ ದರ್ಶನ ಮಾಡಿಕೊಂಡು ಧನ್ಯಳಾಗ ಬೇಕೆಂದು ರಾಜಪುರೋಹಿತನ ಮುಖಾಂತರ ತಿಳಿಸುತ್ತಾರೆ. ಆಗ ಮೀರಾ ಬಾಯಿಗೆ ಈ ಸಂಗತಿಯನ್ನು ಕೇಳಿ ಎದೆ ತಲ್ಲಣಿಸಿಹೋಯಿತು. ಮರುಕ್ಷಣದಲ್ಲಿ ಸರ್ವಭರಿತನಾಗಿ ಮುಖ ತೋರುವದನ್ನು ಪ್ರತ್ಯಕ್ಷವಾಗಿಸಿದ ಪ್ರಹ್ಲಾದನ ಚರಿತ್ರೆ ಸ್ಮೃತಿಪಟಲದ ಮೇಲೆ ಸುಳಿದು, ಆತನ ಲೀಲೆಯಲ್ಲಿ ಶ್ರದ್ಧೆ ಹುಟ್ಟಿತು. ಅವಳು ಆ ರಾಜಪುರೋಹಿತನಿಗೆ ಆಗಲಿ ಆ ಪರಮಾತ್ಮನ ದರ್ಶನವನ್ನು. ಆತನು ಹೇಳಿದಂತೆ, ಅಲ್ಲಿಯೇ ಪಡೆಯುವೆನೆಂದು ಹೇಳಿಕಳಿಸಿದಳು. ಮರು ದಿವಸ ಸಂಜೆಯ ಸಮಯದಲ್ಲಿ ಅಲ್ಲಿಗೆ ಹೋಗುವ ವೇಳೆಯನ್ನು ತಿಳಿಸಿ ರಾಜ ಪುರೋಹಿತನು ತನ್ನ ಯಶಸ್ವೀದೌತ್ಯದ ವಿಷಯವನ್ನು ದೊರೆ ವಿಕ್ರಮಾದಿತ್ಯ ರಾಣಾಗೆ ಹೇಳಿದನು. ಆತನಿಗೂ ಸಂತೋಷವಾಯಿತು. ಇನ್ನೇನು ಮನೆಯ ಮರ್ಯಾದೆಗೆ ಮೃತ್ಯುವಾಗಿದ್ದ ತನ್ನ ಅತ್ತಿಗೆ ಮೀರಾಬಾಯಿಯು ಕತೆಮುಗಿಯಿ ವದೆಂದುಕೊಂಡನು. ಮರುದಿವಸ ಸಂಜೆಯ ಸಮಯದಲ್ಲಿ ಮೀರಾಬಾಯಿ ಸ್ನಾನ ಪೂಜೆಗಳನ್ನು ಮಾಡಿಕೊಂಡು ಸಿದ್ಧಳಾಗಿದ್ದಳು ಹರಿರೂಪದಲ್ಲಿಯ ಗಿರಿಧರ ಗೋಪಾಲನನ್ನು ಕಾಣಲು. ರಾಜದೂತರು ಜೊತೆಯಲ್ಲಿ ಆ ಹಸಿದ ಸಿಂಹವಿದ್ದ ಪಂಜರದಲ್ಲಿಗೆ ಕರೆದುಕೊಂಡು ಹೋಗಿ, ಅದರ ಬಾಗಿಲ ತೆಗೆದು ಅವಳನ್ನು ಆ ಪಂಜರದೊಳಕ್ಕೆ ಕಳುಹಿ ಬಾಗಿಲನ್ನು ಭದ್ರವಾದಿ ಹಾಕಿಕೊಂಡು ಹೋಗಿಬಿಟ್ಟರು.

ತನ್ನ ತಾರಕನಾದ ಶ್ಯಾಮನ ಧ್ಯಾನದಲ್ಲಿ ಮೈಮರೆತ ಮೀರಾಬಾಯಿ ಆ

ಪಂಜರದಲ್ಲಿ ಪ್ರವೇಶ ಮಾಡಿದಳು, ಅವಳ ಅಂತರಂಗದ ಆ ಪ್ರೇಮ ಮೂರ್ತಿಯನ್ನು ಅವಳು ಆ ಪಂಜರದಲ್ಲಿ ಕಂಡಳು :

ಬಸೋ ಮೇರಿ ನೈನನಮೆ ನಂದಲಾಲ ।
ಮೋಹಿನಿ ಮೂರತ ಸಾವಲಿ ಸೂರತ ನೈನಾ ಬನೆ
ವಿಶಾಲ ।
ಅಧರ ಸುಧಾರಸ ಮುರಲೀ ರಾಜತ ಉರ ಬೈಜಂತೀ
ಮಾಲ ।
ಛೂದ್ರ ಘಂಟಿಕಾ ಕಟಿತಟ ಶೋಭಿತ ನೂಪುರ ಶಬ್ದ
ರಸಾಲ
ಮೀರಾ ಪ್ರಭು ಸಂತನ ಸುಖದಾಯೀ ಭಗತ ಬಲವ
ಗೋಪಾಲ ।

ಈರೇಳು ಲೋಕಗಳನ್ನು ಬೆಳಗುವ ಆ ಮನಮೋಹಕ ಪ್ರಿಯತಮ ನಾದ ನಂದಲಾಲನ ಮೂರುತಿಯು ಕಂಗಳಲ್ಲಿ ತುಂಬಿಕೊಳ್ಳಲಿ, ಆತನ ತುಟಿ ಗಳಿಂದ ಮುರಲಿಯ ಮುಂಖಾತರ ಮಧುನಾದವಾಗಿ ಬಂದು ಅಂತರಂಗವ ಮೇಲೆ ಮಾಲೆಮಾಲೆಯಾಗಿ ಮೆರೆಯಲಿ. ನನ್ನ ಕಟಿಯಲ್ಲಿರುವ ಕಿರು ಘಂಟೆಗಳ ಸುನಾದವು ಈ ದಡದಿಂದಾಚೆ ದಡಕ್ಕೆ ದಾಟಸಲಿ. ವಾತ್ಸಲ್ಯಮಯವಾದ ಮೀರಾಬಾಯಿಯು ಗಿರಿಧರ ಗೋಪಾಲನು ಎಲ್ಲಿದ್ದರಲ್ಲಿ ಸುಖವನ್ನು ದಯ ಪಾಲಿಸುವನು ಎಂದು ಹಾಡಿ ನರ್ತಿಸತೊಡಗಿದಳು. ಪಶು, ಕ್ರೂರ ಪಶು ಕೂಡ ಗಾಯನ ನರ್ತನಗಳಿಂದ ಆಕರ್ಷಣೆಗೊಂಡು ಮುಗ್ಧ ಭಾವವುಳ್ಳು ದಾಗಿ ತನ್ನ ಹಿಂಸಾ ವೃತ್ತಿಯಿಂದ ಆ ಕ್ಷಣದಲ್ಲಿ ಮುಕ್ತ ಆಗುವವೆಂಬುದಕ್ಕೆ ಮೀರಾಬಾಯಿಯು ಸೇರಿದ ಪಂಜರದಲ್ಲಿಯ ಹಸಿದ ಸಿಂಹವು ಅರಳಿದ ಕಣ್ಣು ಗಳಿಂದ ನೋಡಿ ಅವಳ ಪಾದಕಮಲದ ಹತ್ತಿರ ಮಲಗಿ ಪಾದಗಳನ್ನು ಮುದ್ದಿ ಸತೊಡಗಿದುದು ಸಾಕ್ಷಿ. ಮೀರಾಬಾಯಿಯ ಅಂತರಂಗದಲ್ಲಿಯ ಶ್ಯಾಮನ ಮೇಲಿನ ಭಕ್ತಿ, ಸಿಂಹದ ಹೃದಯದಲ್ಲಿ ನರಹರಿಯ ಪ್ರೀತಿಯಾಗಿ ಮಾರುತ್ತರದ ರೂಪದಲ್ಲಿ ಮೀರಾಬಾಯಿಯನ್ನು ಪ್ರೀತಿಸಿದ್ದು ಒಂದು ಸತ್ಯ ಸಂಗತಿಯಾಗಿರ

ಬಹುದೇನೋ. ಆ ರಾತ್ರಿಯೆಲ್ಲ ಆ ಪಂಜರದಲ್ಲಿ ಆ ಹರಿಪ್ರೇಮ ಸಮಾಧಿಯಲ್ಲಿ ಸಿಂಹ ಹಾಗೂ ಮೀರಾಬಾಯಿ ಇಬ್ಬರೂ ಇದ್ದುದು ವಿಕ್ರಮಾದಿತ್ಯ ರಾಣಾನಿಗಾಗಲಿ, ಅವನ ಕೈವಾರಿಗಳಿಗಾಗಲಿ ಹೇಗೆ ಗೊತ್ತು; ಅವರೆಲ್ಲರು ತಮ್ಮ ಯೋಚನೆಯಂತೆ ಅವಳ ಕತೆ ಮುಗಿದುಹೋಗಿದೆಯೆಂದು ನಂಬಿದರು. ಆದಕ್ಕಾಗಿ ಅವನು ತನ್ನ ಕೈವಾರಿಗಳಿಗೆ ಪಂಜರದಲ್ಲಿ ಉಳಿದಿರುವ ಅವಳ ಅಸ್ತಿಗಳನ್ನು ಆಯ್ದುಕೊಂಡು ಬರಲು ತಿಳಿಸಿದನು. ಆದರೆ ಅಲ್ಲಿ ಅವರಿಗೆ ಕಾಯ್ದಿದ್ದುದು ಬೇರೆಯೇ ಇತ್ತು.

ವಿಕ್ರಮಾದಿತ್ಯನ ಕೈವಾರಿಗಳು, ಅಲ್ಲಿಯ ಸೇವಕರು ಪಂಜರದ ಬಾಗಿಲಿಗೆ ಬಂದು ಒಳಗೆ ನೋಡುತ್ತಾರೆ, ಸಮಾಧಿಸ್ಥಳಾದ ಮೀರಾಬಾಯಿಯ ಜೊತೆಯಲ್ಲಿ ಅಹಿಂಸಾ ವ್ರತಧಾರಿಯಾಗಿ ಬಂಧು ಭಾವದ ಸ್ನೇಹಸಮಾಧಿಯಲ್ಲಿ ಅವಳ ಪಾದಕಮಲದ ಬಳಿ ಸಾಕಿದ ನಾಯಿಯಂತೆ ಮಲಗಿಕೊಂಡಿದೆ.ಅವರೆಲ್ಲರು ತಮ್ಮ ಕಣ್ಣುಗಳನ್ನು ನಂಬದಾದರು. ಆದರೂ ಸತ್ಯಸಂಗತಿಯನ್ನು ಅವರಲ್ಲಿಯ ಅಪನಂಬಿಗೆಯು ಅದೆಂತು ಸುಳ್ಳಾಗಿಸುವುದು ಸಾಧ್ಯ ? ಅವಳಿಗೆ ಅವರೆಲ್ಲರೂ ನಮಸ್ಕರಿಸಿದರು. ಮೀರಾಬಾಯಿಗೆ ಅವಳ ಶ್ಯಾಮನ ದರ್ಶನವಾಗಿದೆಯೇ ಎಂದು ಕೇಳುವ ಆವಶ್ಯಕತೆಯಿಲ್ಲದುದರಿಂದ ಅವಳನ್ನು ಅರಮನೆಯ ನೆರೆಯ ಘನಶ್ಯಾಮನ ಮಂದಿರಕ್ಕೆ ಕರೆದುಕೊಂಡು ಹೋದರು.

ಸಿಂಹಕ್ಕೆ ಮೀರಾಬಾಯಿಯನ್ನು ಬಲಿಕೊಟ್ಟನು ವಿಕ್ರಮಾದಿತ್ಯನು ಎಂಬ ವಿಷಯವು ಕಾಡಂಬೇಗೆಯಂತೆ ಪಸರಿಸಿತ್ತು. ಮೀರಾಬಾಯಿಯು ಪುನಃ ಘನಶ್ಯಾಮನ ಸೇವೆಗಾಗಿ ಬಂದು ಅರ್ಚನೆ, ಭಜನೆ, ನೃತ್ಯಗಳಲ್ಲಿ ತನ್ನ ಸಖಿಯರೊಡನೆ ಸೇರಿಕೊಂಡಿರುವುದು ಜನರಲ್ಲಿ ಆಶ್ಚರ್ಯ ಆನಂದಗಳೆರಡನ್ನೂ ಏಕಕಾಲಕ್ಕೆ ಉಂಟುಮಾಡಿತು. ಈ ಘಟನೆಯಿಂದ ವಿಕ್ರಮಾದಿತ್ಯ ರಾಣಾನು ತನ್ನ ಮುಖಕ್ಕೆ ತಾನೇ ಮಸಿ ಬಳೆದುಕೊಂಡಂತಾಯಿತು. ಜನರಲ್ಲಿ ಅವನ ಬಗ್ಗೆ ತಿರಸ್ಕಾರವು ಪ್ರಾರಂಭವಾಯಿತು. ಮೀರಾಬಾಯಿಯ ಭಕ್ತಿಯ ಮಹಿಮೆಯು ದೇಶಾದ್ಯಂತ್ಯ ಹರಡಿತು, ಭಕ್ತಬಂಧುಗಳು, ಅಭಿಮಾನಿಗಳು ಮೀರಾಬಾಯಿಯ ದರ್ಶನಕ್ಕಾಗಿ ತಂಡೋಪತಂಡವಾಗಿ ಸೇರತೊಡಗಿದರು.

# ಕೃಷ್ಣ ಸರ್ಪ

ಮೀರಾಬಾಯಿಯನ್ನು ಹಸಿದ ಸಿಂಹದ ಪಂಜರದಲ್ಲಿ ಹಾಕಿದರೂ ಆ ಸಿಂಹವು ಅವಳನ್ನು ತಿನ್ನದೆ ಅವಳಲ್ಲಿ ತೋರಿದ ಭಕ್ತಿಯಿಂದ ಅವಳು ಬದುಕಿ ಉಳಿದದ್ದು ಜನರಲ್ಲಿ ಭಕ್ತಿಯನ್ನು ಹೆಚ್ಚಿಸಿದರೆ, ರಾಣಾ ವಿಕ್ರಮಾದಿತ್ಯನಲ್ಲಿ ಕೋಪ, ಅವಮಾನದಿಂದ ಸೇಡಿನ ವೃತ್ತಿ ಭಯಂಕರವಾಗಿ ಎಚ್ಚರಗೊಂಡವು. ಮೀರಾಬಾಯಿಯನ್ನು ಕೊಲ್ಲುವ ಉಗ್ರ, ಆದರೆ ಜನರಿಗೆ ತಿಳಿಯದಂಥ ಉಪಾಯಗಳನ್ನು ಯೋಚಿಸತೊಡಗಿದನು. ಅವನ ದುಷ್ಟ ಸಂಗಾತಿಗಳು ಈ ದುರ್ಮಾರ್ಗ ಗಾಮಿಯಾದ ಅವನನ್ನು ಇನ್ನೂ ಹೆಚ್ಚು ಹೆಚ್ಚಾಗಿ ಪ್ರಚೋದಿಸ ತೊಡಗಿದರು. ಉರಿಯುವ ಬೆಂಕಿಗೆ ತುಪ್ಪವನ್ನು ಹಾಕಿದಂತಾಯಿತು. ರಾಣಾ ವಿಕ್ರಮಾದಿತ್ಯನು ರಾಜಪುರೋಹಿತನನ್ನು ತನ್ನ ಕೈವಾರಿಯಾಗಿ ನಡೆದು ಕೊಂಡು ಮೀರಾಬಾಯಿಯ ಮೃತ್ಯುವಿಗೆ ಸಾಧನವಾಗುವಂತೆ ಆತನಿಗೆ ಪ್ರಾಣದ ಭೀತಿಯನ್ನು ತೋರಿಸಿ, ಒಪ್ಪಿಕೊಳ್ಳುವಂತೆ ಮಾಡಿದ್ದನು,

ರಾಣಾ ವಿಕ್ರಮಾದಿತ್ಯನು ಅರಮನೆಯ "ಪಕ್ಕದಲ್ಲಿರುವ" ಗಿರಿಧರ ಗೋಪಾಲನ ಗುಡಿಯಲ್ಲಿ ಎಂದಿನಂತೆ ಪೂಜೆ ಪುನಸ್ಕಾರಗಳಲ್ಲಿ ತೊಡಗಿರುವ ಮೀರಾಬಾಯಿಯ ಪೂಜೆಗೆಂದು ಸಾಲಿಗ್ರಾಮ ಹಾಗೂ ಹೂವಿನ ಬುಟ್ಟಿ ಯನ್ನು ಕಳಿಸಿಕೊಡುವ ತಂತ್ರವನ್ನು ಹೂಡಿದ. ಆ ಸಾಲಿಗ್ರಾಮ ಹಾಗೂ ಹೂವಿನ ಬುಟ್ಟಿಯಲ್ಲಿ ಉಗ್ರವಾದ ಕಾಳಸರ್ಪವೊಂದು ಇಟ್ಟು, ರಾಜಪುರೋ ಹಿತನ ಮುಖಾಂತರ ಕೊಟ್ಟು ಕಳಿಸಿದ. ರಾಜ ಪುರೋಹಿತನು ವಿಕ್ರಮಾದಿತ್ಯನ ಮಂತ್ರಾಲೋಚನೆಗೆ ಅನುಗುಣವಾಗಿ ಹೋಗಿ ಮೃದು ಮಧುರ ಭಯ ಭಕ್ತಿಯ ಮಾತುಗಳಿಂದ ತಾಯಿ ಮೀರಾಬಾಯಿಯನ್ನು ಮಾತಾಡಿಸಿ, ಪೂಜೆ ಗೆಂದು ರಾಣಾ ವಿಕ್ರಮಾದಿತ್ಯನು ಸಾಲಿಗ್ರಾಮ ಮತ್ತು ಪುಷ್ಪದ ಕರಡಿಗೆಯನ್ನು ಕೊಟ್ಟು ಕಳಿಸಿದ ವಿಷಯವನ್ನು ತಿಳಿಸಿದನು. ನಿಷ್ಕಲ್ಮಷ, ಮೋಸವನ್ನರಿಯದ ಮೀರಾಬಾಯಿಯು ಎಲ್ಲದರಲ್ಲೂ, ಎಲ್ಲರಲ್ಲೂ ಆ ಘನಶ್ಯಾಮನನ್ನೇ ಕಾಣುವ ತನ್ನ ಸಹಜ ಪ್ರವೃತ್ತಿಗನುಗುಣವಾಗಿ ರಾಜಪುರೋಹಿತನೊಡನೆ ದೊರೆ ವಿಕ್ರ

ಮಾದಿತ್ಯ ರಾಣಾ ಕಳಿಸಿಕೊಟ್ಟ ಸ ಲಿಗ್ರಾಮವಿರುವ ಹೂವಿನ ಕರಡಿಗೆ ಯನ್ನು ಅತ್ಯಂತ ಆದರ ಹಾಗೂ ಗೌರವಗಳಿಂದ ತನ್ನ ಪ್ರಿಯಪತಿ ಘನಶ್ಯಾಮನ ಅಲಂಕಾರಕ್ಕೆ ಪೂಜಾಸಮಯದಲ್ಲಿ ಬಂದಕಾಣಿಕೆಯೆಂದು, ಸ್ವೀಕರಿಸಿ ಪೂಜಾಗೃಹದಲ್ಲಿ ಇಟ್ಟು ಬಂದು ಆ ರಾಜಪುರೋಹಿತನನ್ನು ಬೀಳ್ಕೊಟ್ಟಳು, ಘನಶ್ಯಾಮನ ಧ್ಯಾನದಲ್ಲಿ ತಲ್ಲೀನಳಾಗಿರುವ ಮೀರಾ ತಾಯಿ ಸ್ನಾನವನ್ನು ಮಾಡಿಕೊಂಡು ಬಂದು ಬಾಲಗೋಪಾಲನುಉಗ್ರನಾಗನ ಫಣೆಯಮೇಲೆ ನೃತ್ಯ ಮಾಡಿದವನ ಪೂಜೆಗೆಂದು ಅಗ್ಗವಣಿ, ಧೂಪ, ದೀಪ, ಗಂಧ ಅಕ್ಷತೆ, ಪುಷ್ಪ, ಪಂಚಾಮೃತ ಮೊದಲಾದವುಗಳನ್ನು ಸಿದ್ಧಮಾಡಿಕೊಂಡು ನಾಮ ಸ್ಮರಣೆಯ ಗಾನದ ಗುಂಗಿನಲ್ಲಿ ಮೈ ಮರೆತು ಶ್ಯಾಮನಿಗೆ ಇಷ್ಟವಿಧಪೂಜೆಯನ್ನು, ಷೋಡಶೋಪಚಾರವನ್ನು ಗೈವಲ್ಲಿ ತೊಡಗಿ ಮೊರೆ ವಿಕ್ರಮಾದಿತ್ಯ ರಾಣಾನು ಕಳಿಸಿದ ಸಾಲಿಗ್ರಾಮ ಹಾಗೂ ಹೂವಿನ ಕರಡಿಗೆಯನ್ನು ಎತ್ತಿಕೊಂಡು ಅದರ ಬಾಯಿ ಯನ್ನು ತೆರೆದು ಕೈಹಾಕಿ ಪುಷ್ಪಗಳನ್ನು ಎತ್ತಿಕೊಳ್ಳುವಾಗ ಅವಳ ಪರುಷ ಹಸ್ತಸ್ಪರ್ಶದಿಂದ ಆ ಕೃಷ್ಣ ಸರ್ಪವು ಮನೋಹರವಾದ ಸಾಲಿಗ್ರಾಮ ಮೂರ್ತಿ ಯಾಗಿ ಮಾರ್ಪಾಡುಗೊಂಡಿತು. ಭಕ್ತಿಯಿಂದ ಇಂಥ ಘಟನೆಗಳು ಅನೇಕ ಭಕ್ತರ ಜೀವನದಲ್ಲಿ ಸಂಭವಿಸಿದ್ದು ಇಲ್ಲಿ ಸಂಸ್ಮರಣೀಯ. ಬಳ್ಳೇಶ ಮಲ್ಲಯ್ಯ ನೆಂಬ ಶಿವಭಕ್ತನು ಶಿವಲಿಂಗವನ್ನು ಪೂಜಿಸದೇ ಪ್ರಸಾದ ಸ್ವೀಕರಿಸದ ನಿಯಮ ಪರಿಪಾಲಿಸುತ್ತಿದ್ದ. ಈ ಶಿವಭಕ್ತನಿಗೆ ವ್ಯಾಪಾರಕ್ಕೆ ಹೋದಾಗ ಕಣ್ಣುಬೇನೆ ಬರಲು ಆತನ ವ್ರತವು ಈಡೇರಿಸುವ ಆತನ ಜೊತೆಗಾರನು ಅವನ ಕಣ್ಣು ಕಾಣಿಸದಿರುವ ಪ್ರಸಂಗದ ಉಪಯೋಗಮಾಡಿಕೊಂಡು ಇಕೋ ಇಲ್ಲಿ ನಿನ್ನ ಶಿವಲಿಂಗವಿದೆಯೆಂದು ಬಳ್ಳವನ್ನು ಮುಚ್ಚಿ ತೋರಿಸಿದ. ಅದು ಶಿವಲಿಂಗ ವೆಂದೇ ಭಾವಿಸಿ ಮಲ್ಲಯ್ಯ ಪೂಜಿಸಿದನು. ಆಗ ಅದು ಶಿವಲಿಂಗವೇ ಆಗಿ ಮಾರ್ಪಟ್ಟಿತು. ಕುರಿಯ ಹಿಕ್ಕೆಯು ಲಿಂಗವೆಂದು ಶ್ರೀಶೈಲದ ಮಲ್ಲಿಕಾರ್ಜುನನ ಯಾತ್ರಿಕರು ಕುರಿಕಾಯುವವನಿಗೆ ಕೊಡಲು ಅದು ಲಿಂಗವೆಂದು ಭಾವಿಸಿ ಪೂಜಿಸಲು ಅದರಲ್ಲಿ ಶಿವನು ಪ್ರತ್ಯಕ್ಷನಾದ. ಭಕ್ತರ ಜೀವನದಲ್ಲಿ ಇಂಥ ಘಟನೆಗಳು ನಡೆದುದನ್ನು ನೋಡಬಹುದು. ಸಹಜ ಭಕ್ತಿಯ ಮೀರಾಬಾಯಿ ಯನ್ನು ಕೊಲ್ಲಲೋಸುಗ ಹೂವಿನ ಕರಡಿಗೆಯಲ್ಲಿ ಕೃಷ್ಣ ಸರ್ಪವನ್ನು ಕಳಿಸಿ

ದಾಗ ಪುಷ್ಪ ಮಾಲೆಯಾಗಿಯೋ ಸಾಲಿಗ್ರಾಮವಾಗಿಯೋ, ಪರಿವರ್ತನೆಗೊಂಡಿರಲು ಸಾಕು. ಈ ಸಂಗತಿಯನ್ನು ಮೀರಾಬಾಯಿಯು ತನ್ನ ಒಂದು ಹಾಡಿನಲ್ಲಿ ಹೇಳಿದ್ದಾಳೆ :

ಸಾಂಪಪಿಟಾರೊ ರಾಣಾ ಭೇಜೋ ।
ಮೀರಾಹಾತ ದಿಯೋ ಜೋ । ನಾಯಿ ಧೋಯ ಜಬ
ದೇಖನ ಲಗಿ । ಸಾಲಿಗ್ರಾಮ ಗಯಿ ಪಾಯ ॥

ಭಗವದ್ಭಕ್ತರನ್ನು ದೇವರು ಆಶ್ಚರ್ಯಕರ ರೀತಿಯಲ್ಲಿ ರಕ್ಷಿಸುತ್ತಾನೆ. ಅದೇ ರೀತಿಯಲ್ಲಿ ಕಾಳಸರ್ಪವನ್ನು ಕರಡಿಗೆಯಲ್ಲಿ ಇಟ್ಟು ಅವಳನ್ನು ಅದು ಕಚ್ಚಬೇಕು ಮತ್ತು ಅದರಿಂದ ಅವಳು ಮೃತಳಾಗಬೇಕು ಎಂಬ ದುರದ್ದೇಶದಿಂದ ರಾಣಾ ವಿಕ್ರಮಾದಿತ್ಯನು ಒಂದು ಬಗೆದರೆ ದೈವವು ಬಗೆದದ್ದು ಬೇರೆಯೇ ಆಯಿತು. ಜನರಿಗೆ ಈ ಸಂಗತಿ ತಿಳಿದು ಆವೇಶದಿಂದ, ಭಕ್ತಿಯಾವೇಶದಿಂದ ದೇವರನ್ನು ಕೊಂಡಾಡಿದರು, ಅವನ ಮಹಿಮೆಯನ್ನು ಹೊಗಳಿದರು. ಅದೇ ವೇಳೆಗೆ ಮೀರಾಬಾಯಿಯ ಉತ್ಕಟ ಭಕ್ತಿಯ ಮಹಿಮೆಯು ದ್ವಿಗುಣಿತಗೊಂಡಿತು, ದೇಶದಲ್ಲೆಲ್ಲ ಈ ಮಹಿಮೆಯ ವಿಷಯವು ಹರಡಿತು.

ಮೀರಾಬಾಯಿಯು ಕೃಷ್ಣಸರ್ಪವನ್ನು ಇಟ್ಟ ಕರಡಿಗೆಯಲ್ಲಿ ಕೈಹಾಕಿದ ಕೂಡಲೇ ಕಚ್ಚಿ ಮೃತಳಾಗುವಳೆಂಬ ನಂಬುಗೆಯಿಂದ ಅವಳ ಮರಣದ ಸುದ್ದಿಯ ದಾರಿಯನ್ನೆ ಕಾಯುತ್ತಿದ್ದ ಮಹಾರಾಣಿಯವರಾದ ಅತ್ತೆ, ಅವಳ ಪರಿವಾರದವರು ಹಾಗೂ ರಾಣಾ ವಿಕ್ರಮಾದಿತ್ಯರು ಅವಳ ಮರಣದ ಸುದ್ದಿಯು ಬರಲು ಅವಳು ಘನಶ್ಯಾಮನ ಮಹಿಮೆಯನ್ನು, ಆತನು ಭಕ್ತರ ಮೇಲಿಟ್ಟಿರುವ ಅತ್ಯಂತ ಮಮತೆಯನ್ನು ಕುರಿತು ಹಾಡಿ ಹಾಡಿ ನೃತ್ಯವನ್ನು ಮಾಡಿ ಮಾಡಿ ತನ್ನನಿಯ ಗಿರಿಧರ ಗೋಪಾಲನನ್ನು ತಣಿಸುವಲ್ಲಿ ಮಗ್ನಳಾಗಿರುವ ಸುದ್ದಿಯು ಬಂದಿತು. ಜನರು ಮೀರಾಬಾಯಿಯ ಭಕ್ತಿಯ ಮಹಿಮೆಯಿಂದ ಮೋಹಿತರಾಗಿ ಚಿತ್ರದ ಬೊಂಬೆಗಳಂತೆ ವರ್ತಿಸುವದೂ ಅವರ ಕಿವಿಗೆ ತಲುಪಿತು. ಇದರಿಂದ ವಿಕ್ರಮಾದಿತ್ಯನಿಗೆ ಹಾಗೂ ಅವನ ಬಳಗದವರಿಗೆ ನಿರಾಸೆ ಅಪಮಾನ ಅಷ್ಟೇ ಅತಿರೇಕವನ್ನು ಮಾಡಿದವು.

ಕೊಲ್ಲುವವನಕ್ಕಿಂತಲೂ ಕಾಯುವವನು ದೊಡ್ಡವನು, ಎಂಬುದು ಜನವಾಣಿ. ದೊಡ್ಡವನೇ ಕಾಯುವದಕ್ಕೆ ಸಿದ್ಧವಾಗಿರುವಾಗ ಮೀರಾಬಾಯಿಯು ಬದುಕಿ ಭಕ್ತಿಯ ಮಹಿಮೆಯನ್ನು ಲೋಕದಲ್ಲಿ ಹರಡುವ ಉತ್ತಮವಾದ ಸಾಧನವಾಗಿ ಜನರಲ್ಲಿ ಭಕ್ತಿ ಭಾವೋದ್ರೇಕವನ್ನು ಗೊಳಿಸತೊಡಗಿದಳು. ಘನಶ್ಯಾಮನು ಅವಳನ್ನು ಅವಳ ನೆರಳಾಗಿ ರಕ್ಷಿಸುತಿದ್ದಾನೆಂಬುದು ಲೋಕಕ್ಕೆ ಖಚಿತವಾಯಿತು.

——

# ವೇಷಧಾರಿ ಸಾಧುಗಳು

ಮೀರಾಬಾಯಿಯ ಭಕ್ತಿಯ ಮಹಿಮೆಯು, ಅವಳ ಅಂತರಂಗದ ಸೌಂದರ್ಯವಾಹಕಗಳಾದ ಭಜನೆಗಳ ಜನಪ್ರಿಯತೆಯು ಹಾಗೂ ಭಕ್ತಿಭಾವದಲ್ಲಿ ಮೈಮರೆದು ನಡಿಸುವ ನೃತ್ಯಸೇವೆಯು, ಸಾಧುಸಂತರ ಜೊತೆಯಲ್ಲಿ ಭಕ್ತಿಯ ವಿಚಾರ ವಿನಿಮಯ, ದೇವರ ಮಹಿಮೆಯ ಚರಿತ್ರದ ಪಠಣಗಳ ಕಾರ್ಯಕ್ರಮಗಳು ಜನಾನುರಾಗವನ್ನು ಸಂಪಾದಿಸಿದ್ದಂತೆ ದೇಶವ ನಾನಾ ಭಾಗಗಳಿಂದ ಜಾತಿ ಕುಲ ಗೋತ್ರಗಳನ್ನು ಮರೆದ ಜನಜಂಗುಳಿಯು ತಂಡೋಪತಂಡವಾಗಿ ಬಂದು; ಮೀರಾಬಾಯಿಯ ಭಕ್ತಿಯ ಗಂಗಾಸ್ನಾನ ಮಾಡಿಕೊಂಡು, ಅವಳ ದರ್ಶನ ಪಾದಸ್ಪರ್ಶನಗಳಿಂದ ಪುನೀತರಾಗಿ ಹೋಗ ತೊಡಗಿದರು. ಈ ಕೀರ್ತಿಯು ನಾಡಿನ ಮೂಲೆ ಮೂಲೆಗಳಿಗೆ ಹಬ್ಬಿಸಲು ಯಾವ ಅರಸರ, ಸಮಾಜದವರ ಯೋಜಿತ ವ್ಯವಸ್ಥೆಯೇನಿದ್ದಿರಲಿಲ್ಲ. ಇದೆಲ್ಲ ಸ್ವಯಂ ಸ್ಫೂರ್ತಿಯಿಂದ ನಡೆದ ಕಾರ್ಯವಾಗಿತ್ತು. ಸಾಮಾನ್ಯ ಜನರಂತೆ, ಸಿರಿವಂತರು, ಪಂಡಿತರು, ಸರದಾರರು, ಅರಸರು, ಸಾಮ್ರಾಟರು ಪ್ರಕಟಿತ ವಾಗಿಯೋ, ಅಪ್ರಕಟಿತವಾಗಿಯೋ ಮೀರಾಬಾಯಿ ಇದ್ದಲ್ಲಿ ಬಂದು ದರ್ಶನಾಶೀರ್ವಾದಗಳಿಗಾಗಿ ಕಾಯುತ್ತಿ ಕೊಂಡಿರುತ್ತಿದ್ದರು.

ಮೊಗಲ ಸಾಮ್ರಾಟನಾಗಲಿದ್ದ ಅಕಬರ ಹಾಗೂ ಆತನ ಅಚ್ಚುಮೆಚ್ಚಿನ ಸುಪ್ರಸಿದ್ಧ ಸಂಗೀತ ಸಮ್ರಾಟ್ ತಾನಸೇನ ಇಬ್ಬರೂ ಮೀರಾಬಾಯಿಯ ಭಜನ ಗಾಯನದ, ಭಕ್ತಿಯ ಮಹಿಮೆಯ ಅಸಾಮಾನ್ಯ ಘಟನೆಗಳ ಸುದ್ದಿಯಿಂದ ಆಕರ್ಷಣೆಗೊಂಡು ಮೀರಾಬಾಯಿಯ ಭಕ್ತಿಯ ಕಾರ್ಯಕ್ರಮಗಳಲ್ಲಿ ಭಾಗ ವಹಿಸಿ ಮೀರಾಬಾಯಿಯ ಪುಣ್ಯದರ್ಶನಾಶೀರ್ವಾದಗಳನ್ನು ಬಯಸಿ ಬರುವ ಯೋಚನೆಯ ಯೋಜನೆಯನ್ನು ಹಮ್ಮಿಕೊಳ್ಳಲುದ್ಯೋಗಿಸಿದರು. ಅವರವರಲ್ಲಿ ಚಿತ್ತೂರಿಗೆ ಹೋಗುವದು ಹೇಗೆ ಎಂಬ ದೀರ್ಘಾವಲೋಚನೆಯನ್ನವರು ನಡೆಯಿಸಬೇಕಾಗಿತ್ತು. ಯಾಕೆಂದರೆ, ಸಮ್ರಾಟನೊಬ್ಬನು ಇಂಥಕಾರ್ಯಕ್ರಮಕ್ಕೆ ಹೋಗುವ ವಿಧಾನಗಳ ಪರ್ಯಾಲೋಚನೆಯಲ್ಲಿ ಅವರು ತೊಡಗಲೇಬೇಕಾ

ಯಿತು. ಈ ಗುರಿಯನ್ನು ಸಾಧಿಸಲು ಅವರು ಎರಡು ವಿಚಾರಗಳನ್ನು ಲಕ್ಷ್ಯದಲ್ಲಿಟ್ಟುಕೊಳ್ಳಬೇಕಾಗಿತ್ತು. ಒಂದು, ಅವರು ಮೊಗಲರ ಕಡು ವೈರಿಗಳಾದ ರಜಪೂತರಲ್ಲಿ ಅಗ್ರಗಣ್ಯ ಮನೆತನವಾದ ಚಿತ್ತೂರಿನ ರಾಣಾಗಳ ರಾಜಧಾನಿ ಚಿತ್ತೂರಿಗೆ ಹೋಗುವದು ಸುಲಭದ ಕಾರ್ಯವಲ್ಲವೆಂಬುದು. ಎರಡನೆಯದೆಂದರೆ, ಚಿತ್ತೂರಿನ ರಜಪೂತ ದೊರೆ ಸ್ವರ್ಗೀಯ ಭೋಜರಾಜನ ಪತ್ನಿಯೂ, ಅಲೌಕಿಕ ಸುಂದರಳೂ ಭಕ್ತಶಿರೋಮಣಿಯೂ ಆದ ಮೀರಾಬಾಯಿಯ ದರ್ಶನ ಪಾದಕಮಲ ಸ್ಪರ್ಶನವನ್ನು ಪಡೆಯುವದು ಹಾವಿನ ಹೆಡೆಯನ್ನು ಕೊಂಡು ಕೆನ್ನೆಯನ್ನು ತುರಿಸಿಕೊಂಡಂತೆ ಎಂಬುದು ಬೆಳಕಿನಷ್ಟು ನಿಚ್ಚಳ.

ಅಕಬರ ಯುವರಾಜನು ಉಳಿದ ಮೊಗಲ ಅರಸರಂತಿರಲಿಲ್ಲ. ಆತನು ಹಲವಾರು ರಜಪೂತ ರಾಣಾರ ಸ್ನೇಹವನ್ನು ತನ್ನ ವಿವೇಕ ಹಾಗೂ ಸದಾಚಾರಗಳಿಂದ ಸಂಪಾದಿಸಿದ್ದನು. ಸನ್ನೀತಿ, ಸುವಿಚಾರಗಳಿಂದ ಪ್ರೇರಿತ ಜೀವನವು ಅವನದ ಗಿದ್ದುದರಿಂದಲೇ ತನ್ನ ಜೀವಮಾನದಲ್ಲಿ ಸುಪ್ರಸಿದ್ಧಳಾದ ಭಕ್ತಳಾದ ಮೀರಾಬಾಯಿಯಂಥವರ ದರ್ಶನವು ಒಂದು ಭಾಗ್ಯವೆಂದೂ, ಅಂಥ ಪುಣ್ಯಾತ್ಮರಿಂದ ಆಶೀರ್ವಾದ ಪಡೆಯುವದೆಂದರೆ, ಜೀವನದಲ್ಲಿ ದೈವೀ ವರವೆಂದೇ ಆತನ ನಂಬುಗೆ. ರಜಪೂತ ರಾಣಾರ ಹಾಗೂ ಮೊಗಲ ದೊರೆಗಳ ರಾಜಕೀಯ ಜೀವನದ ಹಿನ್ನೆಲೆಯಲ್ಲಿ ಇವು ಬೆಂಕಿಯ ಕೂಡ ಚಿನ್ನಾಟವಾದಂತೆಯೆ. ಆದರೆ ಧಾರ್ಮಿಕ ಭಾವೋದ್ದೀಪಿತನಾದ ಅಕಬರನ ಭಕ್ತಿಯ ಹಿನ್ನೆಲೆಯಲ್ಲಿ ಅದು ನಿಜಕ್ಕೂ ಬೆಂಕಿಯ ಜೊತೆ ಚಿನ್ನಾಟವೇನಾಗಿರಲಿಲ್ಲ. ಆದರೇನು ವ್ಯಾವಹಾರಿಕ ಜೀವನ ನಡೆಸುವವರ ಮಧ್ಯದಲ್ಲಿರುವ ಮೀರಾಬಾಯಿಯೇ ನಿತ್ಯ ಅಗ್ನಿಪರೀಕ್ಷೆಗೊಳಪಟ್ಟುದನ್ನು ನೋಡಿದಾಗ ಅಕಬರನ ಪಾಲಿಗೆ ಎಂಥ ಭಯಾನಕ ವಾತಾವರಣವು ಅಲ್ಲಿತ್ತೆಂದು ಬೇರೆ ಹೇಳಬೇಕಿಲ್ಲ. ಆದರೂ ಅಕಬರನ ಭಕ್ತಿಯು ಮಾರ್ಗದರ್ಶನ ಮಾಡಿದಂತೆ ಕಾಣುತ್ತದೆ. ಸಂಗೀತ ಸಾಮ್ರಾಟ ತಾನಸೇನ ಮತ್ತು ಯುವರಾಜ ಅಕಬರ ಇಬ್ಬರೂ ಸಂತಶ್ರೇಷ್ಠ ಮೀರಾಬಾಯಿಯ ದರ್ಶನಕ್ಕಾಗಿ ಸಾಧುಗಳ ವೇಷದಲ್ಲಿ ನಿಜವಾಗಿಯೂ ಅವರು ಮೀರಾಬಾಯಿಯ ಗಿರಿಧರ ಗೋಪಾಲನ ಮಂದಿರಕ್ಕೆ ಸುಲಭವಾಗಿ ಬಂದು ತಲುಪಿದರು. ಅವಳ ಭಜನಾಗಾಯನ ದೇವೋನ್ಮಾದದಲ್ಲಿ ನೃತ್ಯ ಸೇವೆ ಹಾಗೂ ದೇವರ ಲೀಲೆಗಳನ್ನು ಚರ್ಚೆ ಮಾಡುತ್ತಿರುವಲ್ಲಿ

ಛದ್ಮವೇಷದಲ್ಲಿದ್ದ ಅಕಬರ ಹಾಗೂ ತಾನಸೇನರು ಭಾಗವಹಿಸಿದರು. ಅವಳ ಭಕ್ತಿಯ ದಿವ್ಯಭಾವದ ಅಭಿವ್ಯಕ್ತಿಯಲ್ಲಿ ತನ್ಮಯತೆಯನ್ನು ಅನುಭವಿಸಿದ ಅಕಬರ ದೊರೆಯ ಅಂತರಂಗ ಎಳೆಯ ಮಕ್ಕಳಂತಾಯಿತು. ತಾನು ಆ ತಾಯಿಯ ಪಾದಗಳನ್ನು ಮುಟ್ಟಿ ನಮಸ್ಕರಿಸಿದಾಗ ತಾನೇಕೆ ಈ ಛದ್ಮ ವೇಷಧಾರಿಯಾಗಿರಬೇಕೆಂಬ ಸಾತ್ವಿಕ ವಿಚಾರ ಅವನಲ್ಲಿ ಮೂಡಿತು. ಒಮ್ಮೆ ತನ್ನ ಈ ವಿಚಾರವನ್ನು ತಾನಸೇನನಿಗೆ ಹೇಳಿದನು. ಮುಗ್ಧಭಾವ ಬಲಿದ ಅಕಬರನ ಸಾತ್ವಿಕ ವಿಚಾರವು ಸ್ತುತ್ಯವಾದುದೇನೋ ಆದರೂ ರಜಪೂತ ದೊರೆಗಳೆಂದರೆ ಮೊಗಲರನ್ನು ಕಂಡರೆ ಮುಂಗಲಿಯು ಹಾವನ್ನು ಕಂಡಂತೆ. ಅಲ್ಲಿಂದ ತಾವಿಬ್ಬರೂ ಜೀವಂತ ತಿರುಗಿ ತಮ್ಮ ರಾಜಧಾನಿಯನ್ನು ಕಾಣುವದು ಸಾಧ್ಯವಿಲ್ಲವೆಂಬ ವ್ಯಾವಹಾರಿಕ ವಿಚಾರವನ್ನು ಹೇಳಿ ಆತನನ್ನು ಆಧ್ಯಾತ್ಮಿಕ ಆದರ್ಶ ಲೋಕದಿಂದ ವಾಸ್ತವಿಕ ವೈರಪ್ರಪಂಚಕ್ಕೆ ಕರೆತಂದು, ಅವನು ಮಾಡಿದ ವಿಚಾರವು ಘಾತುಕವಾದುದೆಂಬುದನ್ನು ಅಕಬರನಿಗೆ ಮನವರಿಕೆ ಮಾಡಿಕೊಟ್ಟನು. ಆಗ ಅಕಬರನು ಛದ್ಮವೇಷದಲ್ಲಿದ್ದರೇನೇ ಮೀರಾಬಾಯಿಯ ದೈವೀಯ ಭಕ್ತಿಯ ಭಜನೆ, ನೃತ್ಯ ಮತ್ತು ದೇವರ ಲೀಲಾ ಸಂಕೀರ್ತನೆಗಳ ಸಂತೋಷದಲ್ಲಿ ಪಾಲುಗೊಳ್ಳಲು ಸಾಧ್ಯವೆಂದು ಬಗೆದನು, ಛದ್ಮವೇಷದಲ್ಲಿಯೇ ಮೀರಾಬಾಯಿಯ ಪಾದಕಮಲಗಳಿಗೆರಗಿ ಆಶೀರ್ವಾದ ಪಡೆದುಕೊಂಡ ಧನ್ಯತಾಭಾವದಲ್ಲಿರುತ್ತಲೇ ತನ್ನ ಹತ್ತಿರವಿದ್ದ ರತ್ನಹಾರವೊಂದನ್ನು ಭಕ್ತಿಯ ಕಾಣಿಕೆಯೆಂದು ತೆಗೆದುಕೊಡಲು ಹೋದ. ಮೀರಾಬಾಯಿ ಯಾವಿಂದಲೂ ಕಾಣಿಕೆಸ್ವೀಕರಿಸಲಾರೆನೆಂದು ಹೇಳಿ ಅದು ತನ್ನ ಸರ್ವಾರ್ಪಣ ಭಕ್ತಿಯಾಚರಣೆಗೆ ವಿರುದ್ಧವಾದ ನಡತೆ. ಅದರಿಂದ ವಿನಾಶವು ಎಂದು ಹೇಳಿ ಅದನ್ನು ತಿರಸ್ಕರಿಸಿದಳು. ಸಾಧುವೇಷದ ಅಕಬರನು 'ತಾಯೇ ತಮ್ಮ ಪಾದಕಮಲಗಳಿ ಗರ್ಪಿಸಲು ಈ ರತ್ನಹಾರವನ್ನು ನಾನು ತಂದಿರದೆ ಘನಶ್ಯಾಮನಿಗೆ ಅರ್ಪಿಸಲು ಭಕ್ತಿಪೂರ್ವಕ ತಂದ ಸಂಗತಿಯನ್ನು ತಿಳಿಸಿ ತನ್ನ ಅಲ್ಪಕಾಣಿಕೆಯ ಸೇವೆಯನ್ನು ಘನಶ್ಯಾಮನಿಗೆ ಮುಟ್ಟಿಸಿ ತನ್ನ ಸೇವೆಗೆ ಅವಕಾಶ ಕೊಡಬೇಕೆಂದು ಪರಿಪರಿ' ಯಿಂದ ಬೇಡಿಕೊಂಡನು. ಒಬ್ಬ ಸಾಧುವು ದೇವರಿಗಾಗಿ ರತ್ನಹಾರ ತಂದರೆ ಅದನ್ನು ಘನಶ್ಯಾಮನ ಕೊರಳಲ್ಲಿ ಹಾಕಿ ಆನಂದಪಡುವದಾದರೆ ತಾನೇಕೆ ಅಡ್ಡ ಬರಬೇಕೆಂದು ಬಗೆದು ನೆಲದ ಮೇಲಿದ್ದ ಆ ರತ್ನಹಾರವನ್ನು ಕೈಗೆತ್ತಿ

ಕೊಂಡು, ಪರಿಶದ್ಧುಗೊಳಿಸಿ, ಅದನ್ನು ಘನಶ್ಯಾಮನ ಕೊರಳಿಗೆ ಹಾಕಿ ಅದು ಹೊಳೆದು ಆ ಶ್ರೀಕಂಠವನ್ನು ಅಲಂಕೃತಗೊಳಿಸಿದುದನ್ನು ಮತ್ತೆ ಮತ್ತೆ ನೋಡುವುದನ್ನು ಅಲ್ಲಿಯ ಸಾಧುಸಂತರು, ನೆರೆದ ಜನಸಮುದಾಯವು ತಮ್ಮ ಭಕ್ತಿಯ ಮೆಚ್ಚುಗೆಯನ್ನು ವ್ಯಕ್ತಗೊಳಿಸಿದರು.

ಅಲ್ಲಿ ನೆರೆದ ಭಕ್ತವೃಂದದಲ್ಲಿ ಈ ಛದ್ಮವೇಷದ ಸಾಧುಗಳಂತೆ ಕುತ್ಸಿತ ಮನದ ಚಾಡಿಕೋರರಾದ ಕೆಲವು ಧೂರ್ತ ಜನರೂ ಇದ್ದರು. ಉಳಿದೆಲ್ಲ ಭಕ್ತರ ಲಕ್ಷ್ಯವು ಕೃಷ್ಣನ ಕೊರಳ ಕಡೆಗೆ ಇದ್ದರೆ ಅವರ ಲಕ್ಷ್ಯವು ಮೀರಾಬಾಯಿಯ ಮೇಲೆ ಅಪವಾದವನ್ನು ಹೊರಿಸಿ ಅವಳನ್ನು ಸಂಕಷ್ಟದಲ್ಲಿ ಹೇಗೆ ಸಿಲುಕಿಸಬೇಕೆಂಬುದರತ್ತ ಇತ್ತು. ಅವಳಿಗೆ ಈ ರನ್ನ ಹಾರವನ್ನು ಕೊಟ್ಟ ಸಾಧುಗಳು ನಿಜವಾಗಿಯೂ ಸಾಧುಗಳೇ ? ಎಂಬ ವಿಚಾರವನ್ನು ಧೂರ್ತರು ಮೆಲುಕುಹಾಕುತ್ತ ರತ್ನಹಾರ ಕೊಟ್ಟ ಸಾಧುಗಳ ಮೇಲೆ ಕಣ್ಣಿಟ್ಟರು. ವೇಷ ಧಾರಿ ಸಾಧುಗಳು ಅಲ್ಲಿಂದ ಹೊರಟು ಬಿಡಲೇಬೇಕು. ಯಾಕೆಂದರೆ ಸಾಧುಗಳು ಅಥವಾ ಸನ್ಯಾಸಿಗಳು ಒಂದು ಸ್ಥಳದಲ್ಲಿ ದಿವಸೆರಡು ದಿವಸಗಳಿಗಿಂತ ಹೆಚ್ಚು ಕಾಲ ತಂಗಿರಬಾರದೆಂಬುದು ಅವರ ವ್ರತ. ಅದಕ್ಕನುಗುಣವಾಗಿ ಅವರೀ ರ್ವರೂ ಅಲ್ಲಿಂದ ಹೊರಟರು. ಅವರು ಎತ್ತ ಹೋಗುವರೆಂಬುದನ್ನು ಅರಿತು ಕೊಳ್ಳಬೇಕೆಂಬ ಆ ಧೂರ್ತ ಜನರು ಅವರನ್ನು ಹಿಂಬಾಲಿಸಿದರು. ಅವರು ರಾಜಸ್ಥಾನದ ಗಡಿಯನ್ನು ದಾಟಿ ಮೊಗಲ ಸಾಮ್ರಾಜ್ಯದಲ್ಲಿ ಕಾಲಿಡುತ್ತಲೆ ತಮ್ಮ ಪೂರ್ವಯೋಜಿತ ಸ್ಥಳವನ್ನು ತಲುಪಿ ತಮ್ಮ ಸುರುಕ್ಷಿತತೆಯ ಭರವಸೆ ಯುಂಟಾಗಲು ಅಂದರೆ ಅಲ್ಲಿ ಮೊಗಲಸೈನಿಕ ಅಧಿಕಾರಿಗಳು ಇವರ ಬರವನ್ನು ನಿರೀಕ್ಷಿಸುತ್ತಿದ್ದಂತೆ ಅವರನ್ನು ಸೇರಿಕೊಳ್ಳಲು ತಮ್ಮ ಛದ್ಮ ವೇಷಗಳನ್ನು ಬದಲಿಸಿಕೊಂಡು ರಾಜಧಾನಿಗೆ ಹೋದರು. ಇದನ್ನೆಲ್ಲ ಜಾಗರೂಕತೆಯಿಂದ ಅವಲೋಕಿಸುತ್ತಿದ್ದಂತೆ ವಿಕ್ರಮಾದಿತ್ಯ ರಾಣಾನ ಕಡೆಯ ಆ ಧೂರ್ತರು ಈ ರಹಸ್ಯವನ್ನು ಪ್ರಕಟಗೊಳಿಸಿದರು. ಮೀರಾಬಾಯಿಯ ಹತ್ತಿರ ಬರುವ ಸಾಧು ಸಂತರು ಹಾಗೂ ಸನ್ಯಾಸಿಗಳು ಫಿತೂರಿಗಳು ಎಂಬ ಅವರ ವಿಚಾರ ವಾದವನ್ನು ಈ ಘಟನೆಯು ದೃಢಪಡಿಸಿತು. ಅವರು ನೇರವಾಗಿ ಬಂದು ವಿಕ್ರಮಾದಿತ್ಯ ರಾಣಾನನ್ನು ಕಂಡು ಮೀರಾಬಾಯಿಯ ಭಜನಾ ಕಾರ್ಯಕ್ರಮ ದಲ್ಲಿ ಭಾಗವಹಿಸಿ ಘನಶ್ಯಾಮನ ಕೊರಳಿಗೆ ಹಾಕಲು ಬಹು ಬೆಲೆಯ ರತ್ನದ

ಹಾರವನ್ನು ಕೊಟ್ಟು, ಮೀರಾಬಾಯಿಯ ಪಾದಗಳನ್ನು ಮುಟ್ಟಿ ನಮಸ್ಕರಿಸಿದವನು ರಾಣಾ ಮನೆತನದ ಕಡುವೈರಿಯೂ ಮಹಮದೀಯನೂ ಆದ ಮೊಗಲ ಯುವರಾಜ ಅಕಬರನೆಂದು ಹೇಳಿದರು. ಈ ವಿಷಯವನ್ನು ಕೇಳಿದಾಗ ವಿಕ್ರಮಾದಿತ್ಯ ರಾಣಾನಿಗೆ ಎಲ್ಲಿಯೂ ಇಲ್ಲದ ಕೋಪ ತಾಪಗಳು, ವೈರ ದ್ವೇಷಗಳು ಕರಾಳ ರೂಪ ತಾಳಿದವು. ರಾಣಾ ವಿಕ್ರಮಾದಿತ್ಯನಿಗೆ ಇದು ಸಹಿಸಲಸಾಧ್ಯವಾಯಿತು, ಈ ಘಟನೆಯು ರಜಪೂತ ದೊರೆಗಳ ಕುಲಕ್ಕೇನೇ ಅವಮಾನದ ಘಟನೆ ಎಂದು ಬಗೆದು ಮೀರಾಬಾಯಿಯನ್ನು ಮರಣಕ್ಕೆ ಗುರಿ ಮಾಡದಿರಲಾಗದೆಂಬ ಶಪಥ ಮಾಡಿ ಅವಳಿಗೆ ಗೊತ್ತಾಗದಂತೆ, ಜನರಿಗೆ ಅದು ತಿಳಿಯದಂತೆ ಒಂದು ಆಲೋಚನೆ ಮಾಡಿದನು. ಇದಕ್ಕೆ ರಾಜಪುರೋಹಿತನ ಸಹಕಾರವನ್ನೂ ಪಡೆದುಕೊಂಡನು. ಈ ಕಾರ್ಯಕ್ಕೆ ಸಿದ್ಧಗೊಳ್ಳತೊಡಗಿದನು. ಏನೂ ಅರಿಯದ ಮೀರಾಬಾಯಿಯು ರತ್ನಹಾರವನ್ನು ತೆಗೆದುಕೊಂಡು ಘನಶ್ಯಾಮನ ಕೊರಳಿಗೆ ಹಾಕಿದಳು. ಅದಕ್ಕೆ ಪ್ರತಿಯಾಗಿ ಅವಳ ಕತ್ತಿಗೆ ಅದು ಕುತ್ತಾಗಿ ಪರಿಣಮಿಸಿತು.

———

# ವಿಷದ ಬಟ್ಟಲು

ಮೀರಾಬಾಯಿಯು ಅವಳ ಪತಿ ಭೋಜರಾಜನ ಕಾಲದಲ್ಲಿ ನಡೆಸಿದ ಭಜನೆ, ಸಾಧು ಸಂತರ ಸಹವಾಸಗಳಿಗಾಗಿ ಪ್ರತ್ಯಕ್ಷ ಮಂದಿರವೊಂದನ್ನು ಕಟ್ಟಿಸಿಕೊಟ್ಟು ಅವಳು ಮಹಾರಾಣಿಯಾಗಿ ಇರಬೇಕಾಗಿದ್ದ ಗಾಂಭೀರ್ಯವನ್ನು ತೊರೆದುದನ್ನು ಸಮರ್ಥಿಸಿದಂತಾಗಿತ್ತೆಂದೂ ತನ್ನ ತಂದೆ ರಾಣಾಸಂಗನು ಸೊಸೆ ಮೀರಾಬಾಯಿಯು ಭೋಜರಾಜನು ರಣರಂಗದಲ್ಲಿ ಮಡಿಯಲು ಸಹಗಮನ ಮಾಡಬೇಕೆಂಬ ಅವಳ ಅತ್ತೆ ಹಾಗೂ ಪರಿವಾರದವರ ಒತ್ತಾಯ ವನ್ನು ತಡೆದು ರಜಪೂತ ಕುಲಸ್ತ್ರೀಯರು ನಡಿಸಿಕೊಂಡು ಬಂದ ವೀರವ್ರತಾ ಚಾರವನ್ನು ಕಡೆಗಣಿಸ ಹಚ್ಚಿದ ಮಹಾಪರಾಧವೆಂದೂ ಬಗೆದೇ ಅವಳನ್ನು ಹಸಿದ ಸಿಂಹಕ್ಕೆ ಆಹಾರವಾಗಲು ಅದರ ಪಂಜರದೊಳಗೆ ಕಳಸಿದ್ದು, ಕೃಷ್ಣ ಸರ್ಪವನ್ನು ಸಾಲೀಗ್ರಾಮವೆಂದು ಹೇಳಿ ಅದನ್ನು ಮೀರಾಬಾಯಿ ಹತ್ತಿರ ಕಳಿಸಿದ್ದು. ಇವೆಲ್ಲ ಎಷ್ಟೋ ಉಪಾಯಗಳಿಂದ ಮೀರಾಬಾಯಿಯು ಪಾರಾಗಿ ಉಳಿದು ತನ್ನ ಅರಮನೆಯ, ಪರಿವಾರದ ಸತ್‌ಸಂಪ್ರದಾಯದ ವಿರುದ್ಧ ನಿರ್ಭೀತಳಾಗಿ ಸಾರ್ವಜನಿಕವಾದ ಭಜನೆ ನೃತ್ಯ, ಸಾಧುಸನ್ಯಾಸಿಗಳ ಸಂಗದಲ್ಲಿ ರುವುದು ಅಲ್ಲದೆ ಇವೆಲ್ಲ ಅಪರಾಧಗಳಿಗೆ ಮಹಾಪರಾಧದ ಕಳಸವೆಂಬಂತೆ ಮೊಗಲ ಯುವರಾಜ ಅಕಬರನಂಥ ರಜಪೂತ ವಂಶದ ಕ್ರೂರ ಹಗೆಯಂನ್ನು ಸಾಧುಗಳ ವೇಷದಲ್ಲಿ ಬರಮಾಡಿಕೊಂಡಳಲ್ಲದೆ, ಅವನಿಂದ ಬೆಲೆಯುಳ್ಳ ರತ್ನ ಹಾರವನ್ನು ತನ್ನ ಸ್ವಾಮಿ ಘನಶ್ಯಾಮನ ಹೆಸರಿನಲ್ಲಿ ಇಸಿದುಕೊಂಡು ಅವ ನಿಂದ ತನ್ನ ಪಾದಗಳನ್ನು ಮುಟ್ಟಿ ನಮಸ್ಕಾರ ಮಾಡಲು ಪರವಾನಿಗೆಯನ್ನು ಕೊಟ್ಟುದು ಎಂದು ಬಗೆದನು ವಿಕ್ರಮಾದಿತ್ಯನು. ಇದಕ್ಕೆ ಮರಣದಂಡನೆಯ ಹೊರತು ಬೇರೆ ಉಪಾಯದಿಂದ ರಜಪೂತ ರಾಣಾರ ಮನೆತನಕ್ಕೆ ತಗುಲಿದ ಈ ಮಹಾಪಾಪದ ಪರಿಹಾರವಾಗಲಾರದೆಂದು ವಿಕ್ರಮಾದಿತ್ಯ ರಾಣಾ ಬಗೆದನು.

ವಿಕ್ರಮಾದಿತ್ಯ ರಾಣಾನು ಒಂದು ಬಟ್ಟಲಲ್ಲಿ ವಿಷವನ್ನು ತುಂಬಿ ಅವನ ಸ್ನೇಹಿತ ವಿಜಯವರ್ಗೀಯ ಎಂಬವನ ಕೈಗಿತ್ತು ಅದನ್ನು ಮೀರಾಬಾಯಿಗೆ ಭಗವಾನನ ಚರಣಾಮೃತವೆಂದು ರಾಜಪುರೋಹಿತನು ಕೊಡುವಂತೆ ಹೇಳಿ ಕಳಿಸಿದನು. ಆ ಪ್ರಕಾರ ವಿಜಯವರ್ಗೀಯನು ರಾಜಪುರೋಹಿತನ ಹತ್ತಿರ ಬಂದು ಇಕೋ ಈ ಬಟ್ಟಲಲ್ಲಿರುವಂಥದು ಭಗವಾನನ ಚರಣಾಮೃತವು. ಇದನ್ನು ಮೀರಾಬಾಯಿಗೆ ಕುಡಿಯಲು ಕೊಡಬೇಕು. ಇದು ರಾಣಾನ ಅಪ್ಪಣೆ, ಮೀರಬಾರದು ಎಂದು ಹೇಳಿಕೊಟ್ಟನು. ಭಯಭೀತನಾದ ರಾಜಪುರೋಹಿತನು ಜೀವದ ಅಂಜಿಕೆಯಿಂದ ಆ ವಿಷದ ಬಟ್ಟಲನ್ನು ತೆಗೆದು ಕೊಂಡು ಅರಮನೆಯ ಪಕ್ಕದಲ್ಲಿ ಇರುವ ಗಿರಿಧರ ಗೋಪಾಲನ ಮಂದಿರಕ್ಕೆ ಹೋದನು.

ಮಂದಿರವನ್ನು ಪ್ರವೇಶಿಸಿದಂತೆ ರಾಜಪುರೋಹಿತನ ಧೈರ್ಯವು ಉಡುಗತೊಡಗಿತು. ಮಾತು ಮೌನವಾಗತೊಡಗಿತು. ಆತನು ನೇರವಾಗಿ ಮೀರಾಬಾಯಿಯು ಇದ್ದ ಸ್ಥಳಕ್ಕೆ ಹೋಗಲು ಯಾವ ಆತಂಕವಿದ್ದಿರಲಿಲ್ಲ ವಾದರೂ ಆತನಲ್ಲಿಯುಂಟಾಗಿದ್ದ ಅನೈತಿಕತೆಯು ಆತನು ದುರ್ಬಲನೂ, ಭೀತಿಗೊಳಗಾದವನೂ ಆಗುವಂತೆ ಮಾಡಿತು. ಅವನ ಮುಖಲಕ್ಷಣದಲ್ಲಿ, ಹಾವಭಾವಗಳಲ್ಲಿ, ನಡಿಗೆಯಲ್ಲಿ ಪರರು ಸಹಿತ ಅರ್ಥಮಾಡಿಕೊಳ್ಳುವಂಥ ದುರ್ಬಲತೆಯ ಬದಲಾವಣೆ ಸ್ಫುಟವಾಗಿ ಎದ್ದು ಕಾಣುತ್ತಿತ್ತು. ಮೀರಾ ಬಾಯಿಯು ಸದಾ ದೇವ ಪ್ರೇಮೋನ್ಮಾದದಲ್ಲಿದ್ದ ಕಾರಣ ಇವೆಲ್ಲವುಗಳ ಕಡೆಗೆ ಅವಳ ಲಕ್ಷ್ಯವಿದ್ದಿರಲಿಲ್ಲ. ಅವಳನ್ನು ಆತನು ಸಹಜವಾಗಿ ತಾನು ಬಂದ ಕೆಲಸಕ್ಕೆ ಒಪ್ಪಿಕೊಳ್ಳುವಂತೆ ಮಾಡಬಹುದಾಗಿತ್ತು. ಅಂಥ ಸದವಕಾಶವನ್ನು ಆತನು ಮನವಿಲ್ಲದ ಮನದಿಂದ ಜೀವಗಳ್ಳನಾಗಿ ಮಾಡಿದನು. ಯಾವಾಗಲೂ ಅಂಜುಬುರುಕರೇ ಹೀನ ಕೆಲಸವನ್ನು ಮಾಡಿದ್ದಾರೆ. ಆ ರಾಜಪುರೋಹಿತನು ತಾಯಿ ಮೀರಾಬಾಯಿಯ ಹತ್ತಿರ ಸಾರಿ ತಾನು ತಂದಿರುವುದು ಭಗವಾನನ ಚರಣಾಮೃತ, ಅದನ್ನು ತಾವು ಸೇವಿಸಬಹುದು. ಈಗಲಾದರೂ ಸೇವಿಸ ಬಹುದು, ಪೂಜಾ ಪುನಸ್ಕಾರಗಳು ಮುಗಿದ ಮೇಲಾಗಲಿ ಸೇವಿಸಬಹುದು ಎಂದು ಹೇಳಿ ಮೀರಾಬಾಯಿಯ ಕೈಗೆ ಆ ವಿಷದ ಬಟ್ಟಲನ್ನು ಇಟ್ಟು ಬಂದನು.

ಮೀರಾಬಾಯಿ ತನ್ನ ಸ್ವಭಾವ ಹಾಗೂ ಶೀಲಕ್ಕನುಗುಣವಾಗಿ ಆ ಚರಣಾಮೃತವನ್ನು ಒಳ್ಳೇ ಪವಿತ್ರ ಭಾವನೆಯಿಂದ, ಭಯಭಕ್ತಿಯಿಂದ ಕೈಯಲ್ಲಿ ತೆಗೆದುಕೊಂಡಳು, ಹಾಗೂ ಆ ಬಟ್ಟಲವು ಚರಣಾಮೃತವಾದ್ದರಿಂದ ಬಹಳ ಜೋಕೆಯಿಂದ ಘನಶ್ಯಾಮನ ಮೂರ್ತಿಯ ಹತ್ತಿರ ಇಟ್ಟು, ನಂತರ ಸ್ನಾನ ಮಾಡಿಬಂದು ಘನಶ್ಯಾಮನನ್ನು ಅಷ್ಟವಿಧಾರ್ಚನೆ, ಷೋಡಶೋಪಚಾರಗಳಿಂದ ಪೂಜಿಸಿ, ಭಜನೆ ಮಾಡಿ, ನೃತ್ಯ ಸೇವೆಯನ್ನು ಪೂರೈಸಿ ಆಮೇಲೆ ನೈವೇದ್ಯವನ್ನು ಹಿಡಿದು, ರಾಜಪುರೋಹಿತನು ತಂದುಕೊಟ್ಟ ಭಗವಾನನ ಚರಣಾಮೃತವನ್ನು ಸೇವಿಸಿದಳು, ಹಾಗೂ ಅತ್ಯಂತ ಸಂತೋಷದಿಂದ ಕುಣಿದಾಡಿದಳು. ಆ ಭಕ್ತರ ಸಭೆಯಲ್ಲಿದ್ದ ರಾಣಾನ ಜನರು ನೋಡಿ ಆಶ್ಚರ್ಯಚಕಿತರಾದರು, ಭಯಗೊಂಡವರೂ ಆದರು. ಇದೂ ಸಹ ಕೃಷ್ಣಸರ್ಪದ ಘಟನೆಯಂತೆ ಐತಿಹಾಸಿಕ ಘಟನೆಯಾದಂತೆ ಕಂಡುಬರುತ್ತದೆ. ಯಾಕೆಂದರೆ ಈ ದುರ್ಘಟನೆಯ ಉಲ್ಲೇಖವನ್ನು ಮೀರಾಬಾಯಿಯು ತನ್ನ ಭಜನಾ ಪದವಲ್ಲಿ ಉಲ್ಲೇಖಿಸಿರುವುದು ಕಂಡು ಬರುತ್ತದೆ ;

"ಓ ರಾಜ, ನೀನೆನಗೆ ವಿಷವಿತ್ತೇ, ಬಲೆ
ಆದರೂ ಅಗ್ನಿಯಲಿ ಪುಟವಿಟ್ಟ
ಚಿನ್ನದೊಲು ಹೊರಬಂದೆ
ಹತ್ತು ಸೂರ್ಯರ ಬೆಳಕ ಕಾಂತಿ ಹೊತ್ತು"

ಎಂದು ಒಂದೆಡೆ ಉಲ್ಲೇಖಿಸಿದರೆ, ಇನ್ನೊಂದೆಡೆ ರಾಣಾಜಿ ಕಳಿಸಿದ ವಿಷವನ್ನು ಕುಡಿದು ಮೀರಾಬಾಯಿ ನಕ್ಕು ನಲಿದಳು (ರಾಣಾಜಿನೆ ವಿಷಕಾ ಪ್ಯಾಲಾ ಭೇಜ್ಯಾ! ಪೀವಕ ಮೀರಾ ಹಾಸಿರೇ! ಪದ ಗುಂಗುರು ಬಾಂದ ಮೀರಾ ನಾಚಿರೆ!) ಹಾಗೂ ನೃತ್ಯಗೈದಳು ಎಂದಿದ್ದಾಳೆ.

ಈ ಎಲ್ಲ ವಿಷ ಘಟನೆಗಳ ಮಧ್ಯದಲ್ಲಿ ಏಕಾಂಗಿಯಾಗಿ, ದೇವರಲ್ಲಿಯ ಭಕ್ತಿಯೊಂದರ ಸಂಗಿಯಾಗಿ ಅವುಗಳನ್ನೆಲ್ಲ ಜಯಿಸುತ್ತ ಬರುವುದನ್ನು ರಜಪೂತ ಪ್ರಜರು, ದೊರೆಗಳು ಕಣ್ಣಾರೆ ಕಂಡರು. ದೇವರು ಭಕ್ತವತ್ಸಲನು ಅವನು ಭಕ್ತರನ್ನು ರಕ್ಷಿಸಲು ಸದಾ ಸಿದ್ಧ. ತನ್ನ ಭಕ್ತರಿಗೆ ಉಂಟಾದ

ಉಪಟಳವನ್ನು ಹೋಗಲಾಡಿಸುವನು ಎಂದು ಈ ಘಟನೆಗಳಿಂದ ಜನರು ಮನಗಂಡರು. ಮೀರಾಬಾಯಿಯ ಕೀರ್ತಿಯು ದಿಗಂತಗಳಲ್ಲಿ ಇಮ್ಮಡಿ ಮುಮ್ಮಡಿ ನೂರ್ಮಡಿಯಾಗಿ ಪಸರಿಸಿತು. ರಾಣಾನು ಜನರ ಹಾಗೂ ಜನಾರ್ದನನ ಪ್ರೀತಿ ವಿಶ್ವಾಸಗಳನ್ನು ಕಳೆದುಕೊಂಡನು.

# ಕಗ್ಗತ್ತಲಲ್ಲಿ

ಭಗವದ್ಗೀತೆಯಲ್ಲಿಯ ಒಂದು ಮಾತು ನೆನಪಿಗೆ ಬರುತ್ತದೆ; ಅತ್ಯಂತ ಕತ್ತಲೆಯು ಅನುಭವವಾಗತೊಡಗಿದಾಗ ಬೆಳಗು ಬರುತ್ತಿರುವದರ ಸೂಚನೆಯದುವೆಂದು. ಮೀರಾಬಾಯಿಯು ಜೀವನದ ಬಾಲ್ಯದ ದಿನಗಳಲ್ಲಿ ತಂದೆ ರತನಸಿಂಗನನ್ನು ಕಳೆದುಕೊಂಡಳು, ಅಜ್ಜ ದೂದಾಜಿಯನ್ನು ನಂತರ ಕಳೆದುಕೊಂಡಳು. ಮಾವನ ಮನೆಗೆ ಲಗ್ನ ಮಾಡಿಕೊಂಡು ಹೋದಮೇಲೆ ವೈವಾಹಿಕ ಜೀವನದ ಕೇವಲ ಹತ್ತು ವರ್ಷಗಳಷ್ಟರಲ್ಲಿ ಪತಿ ಭೋಜರಾಜ ರಾಣಾನನ್ನು ಕಳೆದುಕೊಂಡಳು. ಆಮೇಲೆ ಮಮತೆಯ ಮಾವ ರಾಣಾಸಂಗನನ್ನು ಪತಿಯನ್ನು ಕಳೆದುಕೊಂಡ ಮೇಲೆ ಕಳೆದು ಕೊಂಡಳು. ಇವೆಲ್ಲ ಕಷ್ಟ ಪರಂಪರೆಯ ರಾತ್ರಿಯ ಆಗಮನವಾದರೆ ಮೈದುನನಾದ ವಿಕ್ರಮಾದಿತ್ಯ ರಾಣಾನು ಪಟ್ಟವೇರಿದ ಮೇಲೆ ಆವಳನ್ನು ಕೊಲ್ಲಲು ಹೂಡಿದ ವಿಷಚಕ್ರದ ಘಟನೆಗಳು ಬಹುದಟ್ಟವಾದ ಕಗ್ಗತ್ತಲೆಯ ಕಾಲವಾಗಿ ಪರಿಣಮಿಸಿತು ಮೀರಾಬಾಯಿಗೆ. ಗಿರಿಧರ ಗೋಪಾಲನಲ್ಲಿಯ ಅಚಲಭಕ್ತಿಯೊಂದು ರಕ್ಷಿಸುತ್ತಿದ್ದ ಅರಿವಿನಲ್ಲಿ ತನಗೆ ಹಾಗೂ ತನ್ನಿಂದ ಜನರಿಗೂ ಆಗುತ್ತಿರುವ ಘೋರ ಕಷ್ಟಗಳ ಘಟನೆಗಳು ಆವಳು ಇನ್ನು ಮೇಲೆ ಮೇವಾಡದ ರಾಜಧಾನಿ ಚಿತ್ತೂರಿನಲ್ಲಾಗಲಿ ಸೋದರಮಾವನ ಮೇಡತಾದಲ್ಲಾಗಲೀ ಇರಲಾಗದೆಂಬ ನಿರ್ಣಯಕ್ಕೆ ಬಂದಿದ್ದಳು. ಆದರೂ ಆವಳು ಈ ನಿರ್ಣಯವನ್ನು ಕಾರ್ಯಗತಗೊಳಿಸುವದು ಸುಲಭ ಆಗಿರಲಿಲ್ಲ. ಅದೇ ರೀತಿ ಆವಳು ಮೇವಾಡದಲ್ಲಿಯೂ ಇರುವುದು ಸುಲಭವಾಗಿರಲಿಲ್ಲ. ತನ್ನ ಕಾಲದಲ್ಲಿದ್ದ ಸಂತ ಶ್ರೇಷ್ಠ ತುಳಸೀದಾಸರತ್ತ ಮಾರ್ಗದರ್ಶನಕ್ಕೆ ಹೊರಳಿದಳು ಎಂಬ ಒಂದು ಪಾರಂಪರಿಕ ಕಥೆಯುಂಟು.

ಮೀರಾಬಾಯಿಯು ತನ್ನ ವಿಶ್ವಾಸದ ಬ್ರಾಹ್ಮಣನೊಬ್ಬನನ್ನು ಕರೆದು ಆತನ ಕೈಯಲ್ಲಿ ಒಂದು ಪತ್ರ ಬರೆದುಕೊಟ್ಟು ಇಂಥ ದಾರುಣ ಪ್ರಸಂಗದಲ್ಲಿ ಸಮಕಾಲೀನ ಸಂತ ತುಳಸೀದಾಸನ ಮಂತ್ರಾಲೋಚನೆಯನ್ನು ಅಪೇಕ್ಷಿಸಿದಳು. ಆವನು ಆ ಪತ್ರವನ್ನು ತೆಗೆದುಕೊಂಡು ತುಳಸೀದಾಸನ ಕೈಗಿತ್ತನು. ಆಗ

ತುಳಸೀದಾಸನು ಮೀರಾಬಾಯಿಯ ಪತ್ರವನ್ನು ಓದಿನೋಡಿದ ಘೋರವಾದ ಯಾತನೆಯನ್ನು ಸಂತ ಮೀರಾಬಾಯಿಯು ಅನುಭವಿಸುತ್ತಿರುವುದನ್ನು ಆತನು ಅರಿತುಕೊಳ್ಳಲಿಕ್ಕೆ ಕಷ್ಟವೇನಾಗಲಿಲ್ಲ. ತುಳಸೀದಾಸನು ಮೀರಾಬಾಯಿಗೆ ಸರಿಯಾದ ಉಪಾಯವೊಂದನ್ನು ಸೂಚಿಸುವದು ತನ್ನ ಕರ್ತವ್ಯವೆಂದು ಬಗೆದು ತನ್ನ ವಿವೇಕಕ್ಕೆ ತೋಚಿದಂತೆ ತುಂಬಾ ಆಲೋಚನೆಯನ್ನು ಮಾಡಿದನು ಹಾಗೂ ದೇವರನ್ನೂ ಮಾರ್ಗದರ್ಶನಕ್ಕಾಗಿ ಪ್ರಾರ್ಥಿಸಿದನು. ತನಗೆ ದೊರೆತ ಪ್ರೇರಣೆಯ ಪ್ರಕಾರ ಪದ್ಯರೂಪದಲ್ಲಿ ಪತ್ರವನ್ನು ಬರೆದು ಕಳುಹಿಸಿದನು :

ಜಾಕೆ ಪ್ರಿಯ ನ ರಾಮ ಬೈದೇಹೀ ।<br>
ತಜಿಯೆ ತಾಹಿ ಕೋಟಿ ಬೈರಿ ಸಮ, ಜದ್ಯಪಿ ಪರಮ<br>
ಸನೇಹೀ ॥<br>
ತಜ್ಯೋ ಪಿತಾ ಪ್ರಹ್ಲಾದ, ವಿಭೀಷನ ಬಂಧು ಭರತ<br>
ಮಹತಾರೀ ॥<br>
ಬಲಿ ಗುರು ತಜ್ಯೋ ಕಂತ ಬ್ರಜ ಬನಿತಹ್ನಿ, ಭವಿ<br>
ಮುದ ಮಂಗಲಕಾರೀ ॥<br>
ನಾತೆ ನೇಹ ರಾಮ ಕೆ ಮನಿಯತ ಸುಹೃದ ಸುಸೇಬ್ಯ<br>
ಜಹಾ ತಾ ।<br>
ಅಂಜನ ಕಹಾ ಆಂಖಿ ಜೇಹೀ ಫೂಟೈ ಬಹುತಕ<br>
ಕಹಾ ಕಹಾ ತಾ ॥೧॥<br>
ತುಲಸೀ ಸೋ ಸಬ ಭಾಂತಿ ಪರಮ ಹಿತ ಪೂಜ್ಯ<br>
ಪ್ರಾನತೆ ಪ್ಯಾರೋ ।<br>
ಜಾಸೋ ಹೋಯ ಸನೇಹ ರಾಮ ಪದ. ಏತೋ<br>
ಮತೋ ಹಮಾರೋ ॥೨॥

ನಮ್ಮ ಗುರಿಸಾಧನೆಯಲ್ಲಿ ಕೋಟಿಗಟ್ಟಲೆ ವೈರಿಗಳು ಮತ್ತು ಪರಮ ಸ್ನೇಹಿತರು ಇದ್ದರೂ ಅವರನ್ನು ಬಿಟ್ಟು ನಮ್ಮ ಗುರಿಯತ್ತ ಸಾಗಲೇಬೇಕು.

ಯಾವ ಪ್ರಕಾರ ಜನ್ಮಕೊಟ್ಟ ತಂದೆಯನ್ನೆ ಪ್ರಹ್ಲಾದನು ಬಿಟ್ಟು ಬಿಟ್ಟನೊ, ಒಂದೇ ಗರ್ಭದಲ್ಲಿ ಜನಿಸಿದ ಅಣ್ಣ ರಾವಣನನ್ನು ಶ್ರೀರಾಮನ ಸಲುವಾಗಿ ವಿಭೀಷಣನು ಹೇಗೆ ತ್ಯಾಗ ಮಾಡಿದನೋ, ಜನ್ಮಕೊಟ್ಟಂಥ ತಾಯಿಯನ್ನು ಭರತನು ಯಾವ ಪ್ರಕಾರ ತ್ಯಜಿಸಿದನೋ, ಬಲಿಚಕ್ರವರ್ತಿಯು ಭಗವಂತನ ಸಲುವಾಗಿ ಸರ್ವಸ್ವವನ್ನು ತ್ಯಾಗಮಾಡಿದನೋ, ಬೃಜ ಪ್ರದೇಶದ ವನಿತೆಯರು ಶ್ರೀಕೃಷ್ಣನ ಸಲುವಾಗಿ ತಮ್ಮ ಗಂಡಂದಿರನ್ನು ಹೇಗೆ ಬಿಟ್ಟು ಬಿಟ್ಟರೊ ಆ ಪ್ರಕಾರ ನಿಮಗೆ ಮಂಗಲಕರವಾಗಬೇಕೆಂದರೆ ಮತ್ತು ಭಕ್ತಿಯ ಆನಂದವನ್ನು ಹೊಂದಬೇಕೆಂದರೆ, ಈ ಮಾರ್ಗದಲ್ಲಿ ಕಂಟಕಕಾರೀ ಆದಂಥವುಗಳನ್ನು ಬಿಟ್ಟುಬಿಡಬೇಕು. ನಾನು ಎಷ್ಟೆಂದು ಹೇಳಲಿ ಈ ದೃಶ್ಯ ಜಗತ್ತಿನಲ್ಲಿಯ ಯಾವ ವಸ್ತುಗಳೂ ನಮಗೆ ಆಂತರಿಕ ಆನಂದವನ್ನೂ ಕೊಡಲಾರವು. ನಮ್ಮ ಕಣ್ಣಿಗೆ ಯಾವ ಅಂಜನವನ್ನೂ ಹಚ್ಚಿಕೊಂಡರೂ ಸಹ ನಮ್ಮ ಅಂತಚಕ್ಷುವು ತೆರೆಯದ ಹೊರತು ಆ ಶ್ರೀರಾಮನ ದರ್ಶನವಾಗುವುದು ಸಾಧ್ಯವಿಲ್ಲ. ನಾನೂ ಸಹ ನನ್ನ ಅತ್ಯಂತ ಪ್ರೀಯ ಪ್ರಾಣಕ್ಕಿಂತ ಪ್ರಿಯವಾದ ಪರಮಹಿತ ಬಯಸುವ ಪತ್ನಿಯನ್ನೇ ಬಿಟ್ಟು ಸರ್ವೇಶ್ವರನಾದ ಶ್ರೀರಾಮನನ್ನೇ ಸರ್ವಸ್ವವೆಂದು ತಿಳಿದುಕೊಂಡು ಶ್ರೀರಾಮ ಪಾದದಲ್ಲಿ ಸ್ನೇಹವನ್ನು ಬೆಳೆಸಿಕೊಂಡಿದ್ದೇನೆ. ನನ್ನ ಗುರಿಯತ್ತಸಾಗಿದ್ದೇನೆ. ಈ ಅಭಿಪ್ರಾಯವನ್ನೇ ನಿಮಗೂ ಹೇಳುತ್ತಿದ್ದೇನೆ.

ತುಳಸೀದಾಸನು ಕಳುಸಿದ ಆಪ್ತಾಲೋಚನೆಯ ಪತ್ರವು ಬಂದು ಕೈ ಸೇರಿತು. ಅದರಿಂದ ದೊರೆತ ಸುವಿವೇಕದ ಪ್ರೇರಣೆಯಂತೆ ಮೀರಾಬಾಯಿಯು ಚಿತ್ತೂರನ್ನು ತೊರೆದುಬಿಡಲು ನಿಶ್ಚಯಿಸಿದಳು. ಇದೇ ವೇಳೆಗೆ ಮೀರಾಬಾಯಿಯ ಸೋದರಮಾವನಾದ ಬೀರಮದೇವನಿಗೂ ಕೂಡ ಮೀರಾಬಾಯಿಯಾಗೆ ಉಂಟಾದ ಘೋರ ತೊಂದರೆಗಳ ವಿಷಯವೂ ಬಂದು ಮುಟ್ಟಿತು. ಆತನ ಹೃದಯವೂ ತಲ್ಲಣಿಸಿ ಹೋಯಿತು. "ತಾಯಿ ಸತ್ತು ಸೋದರ ಮಾವನು ಇರಬೇಕು" ಎಂಬುದು ಜಾನರಪದದ ಅನುಭವಾಮೃತ. ಮೀರಾಬಾಯಿಗೆ ಸೋದರಮಾವ ಬೀರಮದೇವ ರಾಣಾನಿಗೆ ತನ್ನ ಸಂಕಟಗಳನ್ನು ಕುರಿತು ಹೇಳಿಕಳಿಸಿ ಪರಿಹಾರಕ್ಕಾಗಿ ಯೋಚಿಸಿರಲಿಲ್ಲವಾದರೂ ಬೀರಮದೇವನಲ್ಲಿರುವ ಮಾತೃಹೃದಯ ದೈವೀಯ ಶಕ್ತಿಯು ಪ್ರೇರಣೆಯನ್ನುಂಟುಮಾಡಿರಲು

ಸಾಕು, ಆತನು ಸ್ವಯಂಸ್ಫೂರ್ತಿಯಿಂದ ನಿರ್ಣಯವನ್ನು ತೆಗೆದುಕೊಂಡು ಮೀರಾಬಾಯಿಯ ಜೀವಿತದ ಉಳಿದ ಕಾಲಾವಧಿಯನ್ನು ತನ್ನ ರಾಜಧಾನಿಲಿ ಶಾಂತರೀತಿಯಿಂದ, ಸುಖದಿಂದ ದೇವರ ಪೂಜೆ, ಭಜನೆ, ನೃತ್ಯ ಮತ್ತು ಸಾಧು ಸಂತರೊಡನೆ ಸಂಭಾಷಣೆಗಳಲ್ಲಿ ಕಳೆಯಲಿ ಎಂದು ಬಗೆದು ಚಿತ್ತೂರಿನ ದೊರೆ ವಿಕ್ರಮಾದಿತ್ಯ ರಾಣಾನಿಗೆ ಪತ್ರ ಬರೆದು ಮೀರಾಬಾಯಿ ಯನ್ನು ಕಳಿಸಿಕೊಡಲು ತಿಳಿಸಿದನು. ಗೃಹಬಂಧನದಲ್ಲಿಯಂತೆ ಇದ್ದು ನಾನಾ ಯಾತನೆಗೊಳಗಾಗಿದ್ದ ಮೀರಾಬಾಯಿಯ ಬಿಡುಗಡೆಗೆ ರಾಜಕೀಯ ಶಕ್ತಿ ಮತ್ತು ದೈವೀಯ ಶಕ್ತಿಗಳು ಎರಡು ಆ ತಾಯಿಯ ಸಹಾಯಕ್ಕಾಗಿ ಧಾವಿಸಿ ಬಂದವು. ರಾಜಕೀಯ ಶಕ್ತಿಯು ತನ್ನಷ್ಟಕ್ಕೆ ತಾನೇ ನೆರವಿಗೆ ಬಂದರೆ, ಆಧ್ಯಾತ್ಮಿಕ ಶಕ್ತಿಯು ಪ್ರಾರ್ಥನೆಗಳಿಗನುಗುಣವಾಗಿ ಬಂದಿತು. ಮೊದಲನೆಯದು ಆಸುರೀ ಶಕ್ತಿಯ ಕಪಿಮುಷ್ಟಿಯಿಂದ ಅಂದರೆ, ವಿಕ್ರಮಾದಿತ್ಯ ರಾಣಾನ ಭದ್ರವಾದ ದುಷ್ಟ ಶಕ್ತಿಯ ಹಿಡಿತದಿಂದ ಪಾರುಮಾಡಲು ವಿವೇಕವು ಯೋಗ್ಯವಾದ ಉಪಾಯವಾಗಲಾರದೆಂದು ದೇವರರಿತುಕೊಂಡು ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕು ಎಂಬ ತತ್ವದಂತೆ ಆತನು ಬೀರಮದೇವನನ್ನು ಅಣಿಗೊಳಿಸಿದಂಥದೆಂದು ತೋರಿದರೆ; ಎರಡನೆಯದು ಮೀರಾಬಾಯಿಯ ಆತ್ಮಕ್ಕೆ ಶಾಂತಿಯನ್ನು ಹಾಗೂ ಸರಿಯಾದ ಬೋಧೆಯನ್ನುಂಟು ಮಾಡಲು ಬಂದ ಆಧ್ಯಾತ್ಮ ಸಂದೇಶವು ಎಂದು ಕಂಡು ಬರುತ್ತದೆ.

ರಾಣಾ ವಿಕ್ರಮಾದಿತ್ಯನು ನಿರಂಕುಶ ಪ್ರಭುವಿನಂತೆ ಮೀರಾಬಾಯಿಯ ವಿಷಯದಲ್ಲಿ ನಡೆದುಕೊಳ್ಳುತ್ತಿದ್ದಂತೆ ಅದನ್ನು ವಿರೋಧಿಸುವ ಶಕ್ತಿ ಯಾವುದೂ ಇರಲಿಲ್ಲ. ಅದು ಸದ್ಯದಲ್ಲಿ ಉಂಟಾಗುವ ಕನಸೂ ಸಹ ಇಲ್ಲದ ಸಮಯ. ಅನಿರೀಕ್ಷಿತವಾಗಿ ಮೀರಾಬಾಯಿಯ ಸಹಾಯಕ್ಕಾಗಿ ಸೋದರ ಮಾವ ಬೀರಮದೇವನಿಂದ ಬಂದ ಪತ್ರವು ವಿಕ್ರಮಾದಿತ್ಯನ ಮನದಲ್ಲಿ ಕೋಲಾಹಲವನ್ನೂ, ಭೀತಿಯನ್ನೂ ಹುಟ್ಟಿಸಿತು. ಈ ಸಂಗತಿಯು ಮೀರಾಬಾಯಿಗೂ ಗೊತ್ತಿರಲಿಲ್ಲ. ಎಲ್ಲರಿಗೂ ಇದು ಆಕಸ್ಮಿಕ ಘಟನೆ.

ಮೀರಾಬಾಯಿಗೆ ವಿಕ್ರಮಾದಿತ್ಯ ರಾಣಾನು ಕೊಟ್ಟ ತೊಂದರೆಯಿಂದ ತಲ್ಲಣಿಸಿದ ಹೃದಯದ ಉದ್ವೇಗ ಪೂರ್ಣ ಪ್ರತಿಕ್ರಿಯೆಂದು ಬೀರಮದೇವನ

ಪತ್ರದಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಚಿತ್ರಿತವಾಗಿತ್ತು. ವಿವೇಕದಿಂದ ಮೀರಾಬಾಯಿಯನ್ನು ಮುಕ್ತ ಮಾಡದಿದ್ದರೆ ಮೇಡತಾದ ವೀರ ರಜಪೂತರ ಆದರ್ಶದ ಕರ್ತವ್ಯವಾದ ಸ್ತ್ರೀಯ ಸಂರಕ್ಷಣೆಗಾಗಿ ರಕ್ತದ ಹೊಳೆಯನ್ನು ಹರಿಸಬೇಕಾದೀತೆಂಬ ಗಂಭೀರವಾದ ಎಚ್ಚರಿಕೆಯನ್ನು ವಿಕ್ರಮಾದಿತ್ಯ ರಾಣಾನಿಗ ಕೊಡಲಾಗಿತ್ತು. ಮೀರಾಬಾಯಿಯು ಗೃಹಬಂಧನದಿಂದ ಮುಕ್ತವಾಗುವ ಶುಭಗಳಿಗೆ ಸನ್ನಿಹಿತವಾಗಿದ್ದುದೇ ಮಹತ್ವದ ಘಟನೆ: ಅದಕ್ಕನುಗಣವಾಗಿಯೋ ಏನೋ ಪುನ: ಪುನಃ ವಿಕ್ರಮಾದಿತ್ಯ ತನ್ನ ರಾಜಮಾತೆಯೂ ಹಾಗೂ ಪರಿವಾರದವರೂ ವಿಚಾರ ವಿನಿಮಯ ಮಾಡಿ ಬೀರಮದೇವನ ಬಹು ಗಂಭೀರವಾದ ಎಚ್ಚರಿಕೆಯನ್ನು ಮನದಂದು ಮೀರಾಬಾಯಿಯನ್ನು ಬೀರಮದೇವನ ರಾಜಧಾನಿಗೆ ಮರಳಿ ಕಳಿಸಿಕೊಟ್ಟನು.

ಮೀರಾಬಾಯಿ ಮರಳಿ ತವರು ಮನೆಯಲ್ಲಿ ತಂಗಿದಳು. ಅದು ಕೇವಲ ತವರು ಮನೆಗೆ ಹೋಗುವುದಕ್ಕಾಗಿ ಮಾಡಿದ ಬಿಡುಗಡೆಯಾಗಿರದೆ ಆತ್ಮದ ಬಯಕೆಯ ವಿರಾಮದ ಆರಾಮದತ್ತ ಪ್ರಯಾಣಕ್ಕಾಗಿ ಸಿದ್ಧತೆಗೊಳ್ಳಲು ಗಮಿಸಲು ಉಂಟಾದ ಬಿಡುಗಡೆಯಾಗಿತ್ತು. ಈಗ ಮೀರಾಬಾಯಿಯು ಸ್ವತಂತ್ರಳಾದಳು. ಮೇಡತಾದ ಪ್ರಜೆಗಳಿಗೆಲ್ಲ ಮೀರಾಬಾಯಿಯ ಬರುವಿಕೆಯು ಒಂದು ದೊಡ್ಡ ಸಂಭ್ರಮದ ಮಹಾ ಪ್ರಸಂಗ. ಬೀರಮದೇವನ ಅರಮನೆ ತುಂಬ ಉತ್ಸವದ ವಾತಾವರಣ. ತಾಯಿ ಮೀರಾಬಾಯಿಯ ಬರುವಿನಿಂದ ಕುಲದೈವ ಗಿರಿಧರ ಗೋಪಾಲನ ಪ್ರೇಯಸಿ ಆಧುನಿಕ ರಾಧಾನ ಅವತರಣದ ಅನುಭವ ಬೀರಮದೇವನಿಗೆ. ಮೀರಾಬಾಯಿಗೆ ಬೀರಮದೇವನು ಪೂಜೆ, ಭಜನೆ, ಸಾಧು ಸಂತರ ಸಮಾಗಮದ ಎಲ್ಲ ಸೌಕರ್ಯಗಳನ್ನು ಒದಗಿಸಿ ಕೊಟ್ಟನು. ಮೀರಾಬಾಯಿಯ ಭಕುತಿಗೆ ನವಯುವ್ವನ ಬಂದಂತೆ ಆಯಿತು. ಅವಳು ಅಲ್ಲಿ ಬಹುಕಾಲ ಉಳಿಯಲಿಲ್ಲ. ಈಗ ಅವಳು ತೀರ್ಥಯಾತ್ರಾರ್ಥಿಯಾಗಿ ತನ್ನ ಪ್ರಿಯತಮ ಲೀಲೆಯನ್ನು ಮಾಡಿದ ಪುಣ್ಯಕ್ಷೇತ್ರಗಳ ದರ್ಶನ ಸಂದರ್ಶನಕ್ಕಾಗಿ ಉತ್ಕಟ ಭಾವೋದ್ದೀಪಿತಳಾದಳು. ಸೋದರಮಾವ ಬೀರಮದೇವನ ಮುಂದೆ ತನ್ನ ಈ ಅಭಿಲಾಷೆಯನ್ನು ಇಟ್ಟಳು. ಪಿತೃವಿನಂತೆ ಮಾತೆಯಂತೆ ಇದ್ದ ಬೀರಮದೇವನು ಧಾರ್ಮಿಕ ಆಚರಣೆಯನ್ನೂ, ಅದೇ ರೀತಿ ಸ್ತ್ರೀಸ್ವಾತಂತ್ರ್ಯವನ್ನೂ ಮನ್ನಿಸಿದಾತನು. ಮೀರಾಬಾಯಿಯ ಈ ಸರ್ವೋತ್ಕೃ

ಅಪೇಕ್ಷೆಯಂತೆ ಶ್ರೀಕೃಷ್ಣನು ಜನಿಸಿ ಜನಜೀವನವನ್ನು ತನ್ನ ಲೀಲೆಯಿಂದ ಪರಿಶುದ್ಧಗೊಳಿಸಿ ಉದ್ಧರಿಸಿದ ನಾಡಾದ ವೃಂದಾವನವಿರುವ ಯಮುನಾ ಪಾತ್ರ ಪ್ರದೇಶಕ್ಕೆ ಹೋಗಲು ಅತ್ಯಂತ ಭಕ್ತಿ ಗೌರವಾದರಗಳಿಂದ ಬೀಳ್ಕೊಟ್ಟನು; ಹಾಗೂ ಆ ದೈವ ಪ್ರೇಮೋನ್ಮಾದಿನಿಯ ಪ್ರೇಮ ಯಾತ್ರೆಯ ದಿವ್ಯ ಕಾರ್ಯದಲ್ಲಿ ಪರೋಕ್ಷವಾಗಿ ಭಾಗಿಯಾಗುವ ಸೌಭಾಗ್ಯ ಪಡೆದನು.

———

# ಗಿರಿಧರ ಗೋಪಾಲನ ಬಾಲ ಲೀಲಾ ನಾಡಿನಲ್ಲಿ

ಗೋಕುಲ ಹಾಗೂ ಮಥುರಾ ವೈಷ್ಣವ ಮತಾನುಯಾಯಿಗಳಿಗೆ ಉತ್ತರ ಭಾರತದಲ್ಲಿಯ ಪುಣ್ಯಕ್ಷೇತ್ರವಾಗಿರುವಂತೆ ಕಾಶಿ ಕೇದಾರಗಳು ಶೈವರ ಪುಣ್ಯಕ್ಷೇತ್ರಗಳು. ಗೋಪಾಲನ ಭಕ್ತರೆಲ್ಲರೂ ಭಾರತ ದೇಶದ ಯಾವುದೇ ಭಾಗದಲ್ಲಿರಲಿ, ಅವರು ತಮ್ಮ ಜೀವಮಾನದಲ್ಲಿ ಒಮ್ಮೆಯಾದರೂ ಯಮುನಾ ನದಿಯ ದಡದಲ್ಲಿರುವ ಬೃಂದಾವನ, ಮಥುರಾ ಮತ್ತು ಗೋಕುಲಗಳಿಗೆ ಭೇಟಿ ಕೊಡುವದು ಒಂದು ಪುಣ್ಯದ ಕೆಲಸ. ಮೀರಾಬಾಯಿಯು ಗೋಕುಲ ವೃಂದಾವನ ಮಥುರಾಗಳಿಗೆ ಜೀವನ ಅಂತ್ಯ ಭಾಗದಲ್ಲಿ ಭೇಟಿ ನೀಡುವುದನ್ನು ಬಯಸಿದಳಷ್ಟೇ ಅಲ್ಲ, ಅಲ್ಲಿ ಉಳಿದ ಆಯುಷ್ಯದ ಬಹುಭಾಗವನ್ನು ಕಳೆಯ ಬೇಕೆಂದು ನಿಶ್ಚಯಿಸಿ ಯಾತ್ರೆಗಾಗಿ ಹೊರಟಳು. ಅಲ್ಲಿ ಬಹುಜನ ಸಾಧು ಸಂತರು ಯಾವಾಗಲೂ ವಾಸಮಾಡಿಕೊಂಡಿರುತ್ತಾರೆ. ಅವರು ಕೃಷ್ಣನ ನಾನಾ ವಿಧವಾದ ಲೀಲೆಯ ಕಥೆಗಳನ್ನು ಹೇಳುತ್ತಾರೆ, ಕೇಳುತ್ತಾರೆ, ಹಾಡುತ್ತಾರೆ. ಆ ಲೀಲೆಗಳು ನಡೆದ ಸ್ಥಾನಗಳಿಗೆ ಭೇಟಿಯನ್ನು ಕೊಡುತ್ತಾರೆ. ಅವರೆಲ್ಲರಿಗೆ ಆಯಾ ಸ್ಥಳಗಳು ಇಂದಿಗೂ ಶ್ರೀಕೃಷ್ಣ ಪರಮಾತ್ಮನ ಸ್ಮೃತಿ ಭಂಡಾರಗಳಷ್ಟೇ ಅಲ್ಲ, ಅವು ಅವನ ಜೀವಂತ ಇರುವಿನ ಪ್ರತ್ಯಕ್ಷತೆಯನ್ನು ಪ್ರಕಟಗೊಳಿಸುವವು. ಹಲವರು ಇಂದಿಗೂ ಶ್ರೀಕೃಷ್ಣನ ಕೊಳಲಿನ ಸುನಾದ ವನ್ನು ಕೇಳಿದರೆ, ಮತ್ತೆ ಕೆಲವರು ರಾಧಾ ಗೋಪಿಯರ ಕಾಲುಗೆಜ್ಜೆಗಳ ನಿನಾದವನ್ನು ಆಲಿಸುತ್ತಾರೆ. ಅವರ ಸಂಭಾಷಣೆಗಳನ್ನು ಕೇಳುವವರಿದ್ದರೆ, ಅವರ ಪ್ರತ್ಯಕ್ಷ ಸಂಚಾರವನ್ನು, ಕಾರ್ಯಕ್ರಮಗಳನ್ನು ಕಾಣುವವರಿರುತ್ತಾರೆ. ನಮ್ಮ ಇಂದ್ರಿಯಗಳಿಗದು ಅಸಾಧ್ಯವೆಂಬುವನ್ನು ನಾವು ಒಪ್ಪಲೇಬೇಕು. ಆದರೆ, ಈ ಭಕ್ತರು ಆ ಪ್ರಸಂಗಗಳನ್ನು ನೋಡುವ ಕೇಳುವ ಸಾಮರ್ಥ್ಯ ವನ್ನು ಪಡೆದಿದ್ದರೆ ಅಚ್ಚರಿ ಪಡಬೇಕಿಲ್ಲ. ಅಸತ್ಯವೆಂದು ವಿರೋಧಿಸಬೇಕಿಲ್ಲ. ಯೋಗಿಗಳೆಲ್ಲರೂ ಸಿದ್ಧಿ ಮಾಡಿಕೊಂಡ ಬಹುದೂರದರ್ಶನ ಬಹುದೂರ ಶ್ರವಣಗಳನ್ನು ನಾವು ಇಂದಿಗೂ ಕಾಣಬಹುದು. ಆಧುನಿಕ ವಿಜ್ಞಾನಿಗಳು

ಇಂದು ಇವುಗಳನ್ನು ಒಪ್ಪಿಕೊಳ್ಳತೊಡಗಿದ್ದಾರೆ. ಬುದ್ಧನು, ಮಹಾವೀರನು, ಉಪನಿಷತ್ತಿನ ಋಷಿಗಳು ಬೋಧಿಸಿದುದನ್ನು ವೈಜ್ಞಾನಿಕ ಉಪಕರಣಗಳನ್ನು ಅಭಿವೃದ್ಧಿಗೊಳಿಸಿ ಅವುಗಳನ್ನು ಕೇಳಬಹುದೆನ್ನುವದನ್ನು ಕೇಳಿದರೆ ಯೋಗಿಗಳು ಅವುಗಳನ್ನು ಸಿದ್ಧಿಮಾಡಿಕೊಂಡು ಪೌರಾಣಿಕ ಘಟನೆಗಳನ್ನು ನೋಡಿದರೆ, ಅವಾಸ್ತವವೆಂದು ಹೇಳುವವು ಅವೈಜ್ಞಾನಿಕವಾಗಬಹುದು.

ಮೀರಾಬಾಯಿಯು ಬಾಲಗೋಪಾಲನ ಪ್ರೇಯಸಿಯಾಗಿ ಆತನ ಜೊತೆಯಲ್ಲಿ ಬೃಂದಾವನ, ಮಥುರಾ ಹಾಗೂ ಗೋಕುಲಗಳಲ್ಲಿ ಆ ಪುರಾತನ ಬಾಲಗೋಪಾಲನ ಪ್ರಿಯದರ್ಶಿನಿಯರ ಆಟಪಾಟಗಳನ್ನು ವಿರಹ ವೈರಾಗ್ಯಗಳ ನೋವು ನಲಿವುಗಳನ್ನು ಅನುಭವಿಸುವ ಬಯಕೆಯು ಭಕ್ತಿಯ ಜೀವನದ ರೀತಿ ನೀತಿಯಾಗಿರುತ್ತದೆ. ಮೀರಾಬಾಯಿಯು ಹೇಳುವಂತೆ, ಅದೇ ರೀತಿ ಅಕ್ಕ ಮಹಾದೇವಿ ಹೇಳುವಂತೆ ಪರಮಾತ್ಮನೊಬ್ಬನೆ ಪುರುಷ, ಉಳಿದ ಸ್ತ್ರೀ ಹಾಗೂ ಪುರುಷ ಭಕ್ತರೆಲ್ಲ ಆತನ ಸತಿಯರು. ಸ್ತ್ರೀ ಪುರುಷ ಈ ಪ್ರತಿಮೆಯಲ್ಲಿ ಈ ಭಕ್ತ ಶಿರೋಮಣಿಗಳು ವ್ಯಕ್ತಪಡಿಸಿರುವುದು ಅತ್ಯಂತ ಸರ್ವೋತಮ ಮೂಲ ತತ್ವವೇನೆಂದರೆ ಪರಬ್ರಹ್ಮ ಹಾಗೂ ಆತನಿಂದ ಬೇರೆಗೊಂಡ ಆತ್ಮರುಗಳಲ್ಲಿ ಮಧುರವಾದ ಬಾಂಧವ್ಯವಿದ್ದು ಅವು ಒಂದನ್ನೊಂದು ಆಕರ್ಷಿಸುತ್ತಿದ್ದು ಒಂದಿಲ್ಲೊಂದು ಘಳಿಗೆಯಲ್ಲಿ ಸಾಮರಸ್ಯವನ್ನು ಆ ಪರಮಾತ್ಮನೊಡನೆ ಹೊಂದುವವು ಎಂಬುದು. ಈ ತತ್ವವನ್ನು ಮಾನವ ಸ್ವಭಾವವನ್ನು ವಿವರಿಸಲು ಬಳಸಿ ಅದರ ವ್ಯಾವಹಾರಿಕ ಅರ್ಥದ ಮಟ್ಟಿಗೆ ಮೀಸಲಾಗಿರಿಸಬಾರದು. ಇದರಿಂದ ಅವರ ಅರ್ಥವನ್ನು ನಾವು ಮರೆತಂತಾಗುತ್ತದೆ. ಈ ವಿಚಾರದಿಂದ ಅವರು ಸ್ತ್ರೀ ಹಾಗೂ ಪುರುಷಭೇದವನ್ನು ಮಾಡುವದಿಲ್ಲ. ಅದೇ ರೀತಿ ಇವರು ಇಂಥ ಭೇದವನ್ನು ಸಂತರಾಗಲಿ, ಸಂತೇತರರಾಗಲಿ ಪ್ರತಿಪಾದಿಸುವದನ್ನು ವಿರೋಧಿಸುತ್ತಾರೆ. ಈ ಮೂಲಭೂತ ವಿಚಾರಕ್ಕನು ಗುಣವಾಗಿಯೇ ಎಲ್ಲ ಸಮಾಜ ಸುಧಾರಕರು ಸ್ತ್ರೀ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯಲು ಸಾಧ್ಯವಾಗಿದೆ.

ಮೀರಾಬಾಯಿಯು ಯಮುನಾ ತೀರಕ್ಕೆ ಬಂದುಬಿಟ್ಟ ಮೇಲೆ ಗಿರಿಧರ ಗೋಪಾಲನ ಬಾಲ್ಯ ಲೀಲಾದ ಈ ನಾಡಿನಲ್ಲಿ ಅವಳನ್ನು ರಾಜಮನೆತನದ

ಘನತೆ ಗೌರವಗಳ ದುರಭಿಮಾನದಿಂದ ಪೀಡೆಪಡಿಸುವವರಾರೂ ಇದ್ದಿರಲಿಲ್ಲ; ತನ್ನ ಪ್ರೀತಿಯ ಗೋಪಾಲನನ್ನು ಕುರಿತು ಭಜನೆಯನ್ನು ಸಾರ್ವಜನಿಕವಾಗಿ ಮಾಡಿ, ಅವನ ವರ್ಣನೆಯನ್ನು ಮನಬಂದಂತೆ ಹಾಡಿ, ಅದಕ್ಕೆ ತಕ್ಕುದಾದ ನೃತ್ಯವನ್ನು ಮನಂಬುಗುವಂತೆ ಮಾಡಿ ದಿವ್ಯ ಭಾವೋನ್ಮಾದದಲ್ಲಿರಲು ರಾಣಾನ ಭೀತಿಯೂ ಅಲ್ಲಿ ಪೀಡಿಸುವಂತಿರಲಿಲ್ಲ. ಆ ರಾಜ್ಯದಲ್ಲಿ ಗಿರಿಧರ ಗೋಪಾಲನಲ್ಲದೆ ಇನ್ನಾರೂ ಅವಳಿಗೆ ಕಂಡುಬರುತ್ತಿರಲಿಲ್ಲ.

ನಿರ್ಮೋಹಿಯಾದ ಮೀರಾಬಾಯಿಯು ಶ್ಯಾಮನಲ್ಲಿರುವ ತೀವ್ರ ಮೋಹದಿಂದ ಸುತ್ತಲಿನ ಜನರ ಯಾವ ಪರಿವೆಯೂ ಇಲ್ಲದೆ ಗಿಡ ಮರ ಕಲ್ಲು ಪಶು ಪಕ್ಷಿಗಳಲ್ಲಿ ತನ್ನ ಮೋಹದ ಇನಿಯನನ್ನು ಅರಿತುಕೊಳ್ಳುವ ಅಪೇಕ್ಷೆ ಯಿಂದ ಕಲ್ಲು ಮುಳ್ಳು ದರಿ ಗಿರಿ ಹೊಳೆ ಹಳ್ಳಗಳನ್ನು ಲೆಕ್ಕಿಸದೆ ಆ ಒಂದೇ ಒಂದು ಮುಖದ ದರ್ಶನಕ್ಕಾಗಿ ಹಸಿವು ನೀರಡಿಕೆಗಳ ಪರಿವೆಯಿಲ್ಲದೆ ತೀರ್ಥ ಕ್ಷೇತ್ರಗಳನ್ನು ಸಂದರ್ಶಿಸುತ್ತ ದಿವ್ಯದ ಯಾತ್ರೆಯಲ್ಲಿದ್ದಳು. ಮೋಹದಿಂದ ಮುಕ್ತರಾದಾಗಲೇ ದುಗುಡ ದುಮ್ಮಾನಗಳ ಎಲ್ಲೆಯನ್ನು ಮೀರಿ ಏಕಾಗ್ರತೆ ಭಕ್ತಿಯಲ್ಲಿ ಪರಿವರ್ತಿತವಾಗುವುದು, 'ಭಕ್ತಿಯನ್ನು ಆರೂ ಮಾಡಬಾರದು ಅದು ಹೋಗುತ್ತ ಕೊಯ್ಯುವದು, ಬರುತ್ತ ಕೊಯ್ಯುವದು' ಎಂಬ ಅನುಭವವು ಶುದ್ಧ ಭಕ್ತಿಯ ಇರವಿನ ಚಿತ್ರವನ್ನು ಕೊಡುವುದು. ಭಕ್ತಿಯ ವಿರಹಾಗ್ನಿಯಲ್ಲಿ ಮೀರಾಬಾಯಿ ಕ್ಷಣಕ್ಷಣಕ್ಕೂ ಸುಟ್ಟುಹೋಗುತ್ತಿದ್ದಳು. ಅವಳು ಧರಿಸಿದ ಕಾವಿಯ ಬಣ್ಣದ ಬಟ್ಟೆಯು ಆವಳ ಜೀವನದ ನಿಜವಾದ ಪ್ರತೀಕವಾಗಿ ಅದನ್ನು ಪ್ರತಿಬಿಂಬಿಸುತ್ತಿತ್ತು.

ಇಂಥಬಟ್ಟೆಯ ಧ್ವಜದಿಂದ ಶೋಭಿಸುತ್ತ ತನ್ನ ಕೀರ್ತಿಯನ್ನು ಮಥುರಾ ಜಿಲ್ಲೆಯಾದ್ಯಂತ ಹರಡಿಕೊಂಡಿದ್ದ ಆಶ್ರಮವೊಂದು ವೃಂದಾವನ ದಲ್ಲಿ ಪರಿಶೋಭಿಸುತ್ತಿತ್ತು. ಅದರಲ್ಲಿರುವವ ಶ್ರೀ ಚೈತನ್ಯ ಪ್ರಭುವಿನ ಭಕ್ತ ನಾದ ಜೀವಗೋಸ್ವಾಮಿ. ಮೀರಾಬಾಯಿಯು ಜೀವಗೋಸ್ವಾಮಿಯನ್ನು ಕಾಣ ಬೇಕೆಂದು ಕಾತರಳಾಗಿದ್ದಳು. ಅವನ ದರ್ಶನ ಬಯಸಿ ಆತನ ಕುಟೀರದ ಬಾಗಲಲ್ಲಿದ್ದ ಆತನ ಅನುಯಾಯಿಗಳಲ್ಲೊಬ್ಬನಿಗೆ ತಿಳಿಸುತ್ತಾಳೆ ಮೀರಾಬಾಯಿ. ಆದರೆ ಜೀವಗೋಸ್ವಾಮಿಯು ಸ್ತ್ರೀಯರ ಮುಖವನ್ನು ನೋಡಲಾಗದೆಂಬ

ಕಠೋರ ವ್ರತವನ್ನು ಪ್ರತಿಪಾಲಿಸುತ್ತಿದ್ದದರಿಂದ ತಾನು ಸ್ತ್ರೀಯಾದ ಮೀರಾ ಬಾಯಿಯನ್ನು ಕಾಣುವುದು ಸಾಧ್ಯವಿಲ್ಲವೇದು ತಿಳಿಸುತ್ತಾನೆ.

ನಾಸ್ತಿ ತೇಷು ಜಾತಿ ವಿದ್ಯಾ ರೂಪ ಕುಲ ಧನ ಕ್ರಿಯಾದಿ ಭೇದಃ ॥72॥

ಯತಸ್ತದೀಯಾಃ ॥73॥

(ಜಾತಿ ವಿದ್ಯೆ ರೂಪ ಕುಲ ಧನ ಕ್ರಿಯೆ ಇತ್ಯಾದಿಗಳ ಮೂಲಕ ಇರುವ ಭೇದ ಗಳು ಭಕ್ತರಲ್ಲಿ ಇರಲರಿಯುವು (72). ಯಾಕೆಂದರೆ ಎಲ್ಲ ಭಕ್ತರು ಭಗವಂತನ ಮಕ್ಕಳೇ (73) ಎಂಬ ಸಂಪ್ರಸಿದ್ಧವಾದ ನಾರದೀಯ ಭಕ್ತಿಸೂತ್ರವನ್ನು ಓದಿದ ಜೀವಗೋಸ್ವಾಮಿಯ ಜಾತಿ ಅಂದರೆ ಸ್ತ್ರೀ ಮತ್ತು ಪುರುಷ ಜಾತಿ ಭೇದವನ್ನು ಮಾಡಿದುದು ಅತ್ಯಂತ ಆಕ್ಷೇಪಾರ್ಹವೇದು ತೋರಿಸಲು ಮೀರಾಬಾಯಿ ಗುರುಸ್ವರೂಪದಲ್ಲಿ ಬಂದಂತೆ ಬಂದು, ಆತನಲ್ಲಿಯ ಅಜ್ಞಾನ ವನ್ನು ಹೋಗಲಾಡಿಸಲು : "ಅರೇ ! ಇತನಿ ತಪಸ್ಯ ಸಾಧನಾ-ಭಜನ ಕರಕೆ ಭೀ ಆಪಕೆ ಹೃದಯ ಸೇ ಸ್ತ್ರೀ ಪುರುಷ ಕಾ ಭೇದ ನಹೀ ಛೂಟಾ ? ಜೀವಾತ್ಮಾ ನ ಸ್ತ್ರೀ ಹೈ, ನ ಪುರುಷ ! ಯಹ ತೋ ಶರೀರ ಕಾ ಖೇಲ ಹೈ!!" ಅರೇ ! ಇಷ್ಟು ತಪಸ್ಯ-ಸಾಧನ ಭಜನ ಮಾಡಿಯೂ ನಿಮ್ಮ ಹೃದಯದಲ್ಲಿ ಸ್ತ್ರೀ ಪುರುಷರ ಭೇದವು ಹೋಗಲಿಲ್ಲವೇ ? ಜೀವಾತ್ಮ ಸ್ತ್ರೀಯೂ ಅಲ್ಲ, ಪುರುಷನೂ ಅಲ್ಲವಲ್ಲವೆ ? ಇದು ಶರೀರದ ಆಟವಾಗಿದೆ." ಎಂದು ಸಂಪ್ರಸಿದ್ಧ ಭಕ್ತಿ-ತತ್ವಜ್ಞಾನಿಯಾದ ಜೀವಗೋಸ್ವಾಮಿಯನ್ನು ಎಚ್ಚರಿಸಲಾಗಿ ಇದನ್ನು ಕುಟೀರದ ಒಳಗಿನಿಂದಲೇ ಕೇಳಿ, ಎಚ್ಚರಗೊಂಡು, ಒಳಗಿನಿಂದ ಬಂದು ಮೀರಾಬಾಯಿಯ ಚರಣಕಮಲಗಳನ್ನು ಮುಟ್ಟಿ ನಮಸ್ಕರಿಸಿ ಪವಿತ್ರವಾದ ಆ ಪಾದಧೂಳಿಯಿಂದ ಪುನೀತನಾದನು.

ಮೀರಾಬಾಯಿ ಮತ್ತು ಜೀವಗೋಸ್ವಾಮಿಗಳಲ್ಲಿ ಭಕ್ತಿ ಸಂಭಾಷಣೆ, ಗಿರಿಧರ ಗೋಪಾಲನ ಲೀಲಾ ಚರಿತಾಮೃತ ಸಂಕೀರ್ತನ ಮುಂತಾದವುಗಳು ನಡೆದು ಅಲ್ಲಿಯ ಭಕ್ತ ಜನರಿಗೆ ಹಬ್ಬವೇ ಆಯಿತು. ಮೀರಾಬಾಯಿಯ ಜೊತೆಯಲ್ಲಿ ಈ ಸತ್ಸಂಗದ ಲಾಭವು ಜೀವಗೋಸ್ವಾಮಿಯ ಜೀವನದಲ್ಲಿ ಹೊಸ ಪ್ರಕರಣವನ್ನೇ ಪ್ರಾರಂಭಿಸಿತು. ಉತ್ತರಭಾರತದ ಭಕ್ತಿಪಂಥದ

ಚರಿತ್ರದಲ್ಲಿ ಈ ತಾತ್ವಿಕ ವಿವೇಚನೆಯು ಒಂದು ಮಹತ್ವದ ಘಟನೆ ಹಾಗೂ ಆಚಾರದಲ್ಲಿ ಒಂದು ಹೊಸ ಬದಲಾವಣೆ ಎಂದು ಬೇರೆ ಹೇಳಬೇಕಾಗಿಲ್ಲ. ಉಪನಿಷತ್ತಿನ ಪರಿಭಾಷೆಯನ್ನು ಬಳಸುವದಾದರೆ ಧೀರೆ ಮೀರಾಬಾಯಿ. ಮೀರಾಬಾಯಿಯ ಭಜನ, ಸಂಭಾಷಣೆಗಳಿಂದ ಆನಂದಸಾಗರದಲ್ಲಿ ವೃಂದಾವನ ದಲ್ಲಿಯ ಭಕ್ತಸಮೂಹವು ಮುಳುಗಿತು. ಅವಳ ವೃಂದಾವನದ ವಾಸ್ತವ್ಯ ದಿಂದ ಅಲ್ಲಿಯ ವಾತಾವರಣಕ್ಕೆ ಪುನಃ ರಾಧಾಭಕ್ತಿಯ ಆವೇಶವು ಮರುಕಳಿಸಿ ದಂತಾಯಿತು.

ಇತ್ತ ಅವಳ ದೊಡ್ಡಪ್ಪನಾದ ಬೀರಮದೇವನ ರಾಜವು ಪುನಃ ಆತನಿಗೆ ದೊರಕೊಂಡಿತು. ಆತನು ಜಯದ ಉತ್ಸವದಲ್ಲಿ ತನ್ನ ಹಿರಿಯ ಮಗ ಜಯಮಲ್ಲನೊಡನೆ ಕೆಲವು ಬ್ರಾಹ್ಮಣರನ್ನು ವೃಂದಾವನಕ್ಕೆ ಕಳಿಸಿಕೊಟ್ಟನು. ಚಿತ್ತೂರಿನ ದೊರೆ ವಿಕ್ರಮಾದಿತ್ಯನು ಯುದ್ಧದಲ್ಲಿ ತೊಡಗಿ ಮೃತನಾದ ಸಂಗತಿ ಯನ್ನು ಮೀರಾಬಾಯಿಗೆ ತಿಳಿಸಿ ಅವನ ಸ್ಥಾನದಲ್ಲಿ ಉದಯಸಿಂಹನು ರಾಣಾನಾಗಿ ಬಂದುದನ್ನೂ ವಿವರಿಸಲು ತಿಳಿಸಿದನು. ಅವರು ಮೀರಾಬಾಯಿಯ ಹತ್ತಿರ ಹೋದರು. ಅವಳ ಮನದಲ್ಲಿ ಬದಲಾವಣೆಯಾಗಿ ಮೇಡತಾಕ್ಕೆ ಬರುವಂತೆ ಪ್ರಾರ್ಥನೆ ಮಾಡಿಕೊಂಡರು.

ಅದೇ ಸಮಯಕ್ಕೆ ಚಿತ್ತೂರಿನ ಹೊಸದೊರೆ ಉದಯಸಿಂಹನು ತನ್ನ ಸಹೋದರ ವಿಕ್ರಮಾದಿತ್ಯ ರಾಣಾನು ತಾಯಿ ಮೀರಾಬಾಯಿಗೆ ಕೊಟ್ಟ ಪೀಡೆಯಿಂದ ತಮ್ಮ ಮನೆತನ ಹಾಗೂ ರಾಜ್ಯಕ್ಕೆ ತೊಂದರೆಗಳು ಬರುತ್ತಿವೆ ಎಂಬ ಧಾರ್ಮಿಕ ಭೀತಿಯುಳ್ಳ ಅವನಿಗೆ ಹಾಗೆ ಅನಿಸತೊಡಗಿತು ; ಹಾಗೂ ನಿರಪರಾಧಿ, ದೇವಭಕ್ತಳಾದ ಮೀರಾಬಾಯಿಗೆ ಕೊಟ್ಟ ತೊಂದರೆಗಾಗಿ ಯಾವ ರೀತಿಯ ಪ್ರಾಯಶ್ಚಿತ್ತವನ್ನು ಪಟ್ಟುಕೊಳ್ಳಬೇಕೆಂಬ ಆಲೋಚನಾಮಗ್ನನಾದಿ ಕೆಲ ಸಜ್ಜನ ಬ್ರಾಹ್ಮಣರನ್ನು ಮೀರಾಬಾಯಿಯ ದರ್ಶನಕ್ಕೆ ಕಳಿಸಿಕೊಟ್ಟು ಕ್ಷಮೆಕೇಳಿ ಮೀರಾಬಾಯಿಯ ಮನವನ್ನು ಒಲಿಸಿ ಚಿತ್ತೂರಿಗೆ ಬರುವಂತೆ ಪ್ರಾರ್ಥಿಸಿಕೊಂಡು ಕರೆದುಕೊಂಡು ಬರಬೇಕೆಂದು ಹೇಳಿಕಳಿಸಿದನು.

ಮೇಡತಾದ ಬೀರಮದೇವನ ಹಾಗೂ ಚಿತ್ತೂರಿನ ಉದಯಸಿಂಹನ ಜನರು ಮೀರಾಬಾಯಿಯು ಇರುವ ಕುಟೀರಕ್ಕೆ ಬಂದು ಅವಳ ಪವಿತ್ರವಾದ

ಚರಣಕಮಲಗಳಿಗೆ ಎರಗಿ, ನಡೆದ ಎಲ್ಲ ಸಂಗತಿಯನ್ನು ವಿವರಿಸಿ ತಾಯಿ ಮೀರಾಬಾಯಿ ದಯೆತೋರಿ ಮೇಡತಾಕ್ಕೆ ಹಾಗೂ ಮೇವಾಡಕ್ಕೆ(ಚಿತ್ತೂರಿಗೆ) ಬರಬೇಕೆಂದೂ ಪ್ರಾರ್ಥಿಸಿಕೊಂಡರು. ಮೀರಾಯಿಗೆ ಆ ಎರಡೂ ದೊರೆಗಳ ಅರಮನೆಯಲ್ಲಿ ಕೆಲಸವಿಲ್ಲವೆಂಬುದು ಗೊತ್ತು. ಅದೇ ಪ್ರಕಾರ ಶ್ರೀ ಕೃಷ್ಣಪರಮಾತ್ಮನು ಎಲ್ಲಿದ್ದಾನೆ, ಅವನ ಭಕ್ತರು ಪರಿಪಾಲಿಸಬೇಕಾದ ನಿಯಮಗಳು ಆವವು ಮತ್ತು ತನ್ನ ಆಕಾಂಕ್ಷೆಯು ಈಡೇರಬೇಕಾದಾಗ ತಾನು ಯಾರ ಸಂಘದಲ್ಲಿ ಹಾಗೂ ಯಾವ ಸ್ಥಳದಲ್ಲಿ ಇರಬೇಕು ಎಂಬ ಸ್ಪಷ್ಟವಾದ ತಿಳುವಳಿಕೆಯು ಉಂಟಾಗಿದ್ದ ಕಾರಣ, ತಿರುಗಿ ಅವರ ರಾಜಧಾನಿಗಳಿಗೆ ಹೋಗುವದವಶ್ಯವಿಲ್ಲವೆಂದು ಮನಗಂಡು ಪರಮಾತ್ಮನ ಅಪ್ಪಣೆಯಿಲ್ಲದ ಕಾರಣ ಬರಲು ಸಾಧ್ಯವಿಲ್ಲವೆಂದು ಆ ಬ್ರಾಹ್ಮಣೋತ್ತಮರಿಗೆ ಹೇಳಿದಳು. ಆದರೆ ಅವರು ದೊರೆಗಳ ಅಣತಿಯಂತೆ ನಡೆದುಕೊಳ್ಳಬೇಕಾಗಿದ್ದುದರಿಂದ ಮೀರಾಬಾಯಿಯನ್ನು ಕರೆದುಕೊಂಡು ಹೋಗಬೇಕೆಂಬ ವಿಚಾರದಿಂದ ಅವಳ ಕುಟೀರದೆದುರು ಕುಳಿತೇಬಿಟ್ಟರು. ಒಂದು ದಿನ ರಾತ್ರಿಯಲ್ಲಿ ತನ್ನ ಬಾಲ್ಯದ ಸಖಿ ಲಲಿತಾಬಾಯಿಯ ಜೊತೆ ಆಲೋಚನೆ ಮಾಡಿ ಬೆಳಗು ಮುಂಜಾವಿನ ಸಮಯದಲ್ಲಿ ಎಲ್ಲರೂ ಗಾಢ ನಿದ್ರೆಯಲ್ಲಿದ್ದಾಗ ಆಕುಟೀರವನ್ನುಬಿಟ್ಟು ಕೊಟ್ಟು ಯಾರಿಗೂ ತಿಳಿಯದಂತೆ ಇಬ್ಬರೂ ಹೋಗಿಬಿಟ್ಟಿದ್ದರು.

———

# ಶ್ರೀಕೃಷ್ಣ ಯೋಗ

ವೃಂದಾವನದಲ್ಲಿ ಕಾಲವನ್ನು ಕಳೆಯುತ್ತಿದ್ದ ಮೀರಾಬಾಯಿಯನ್ನು ಮೇಡತಾಕ್ಕೆ ಕರೆದುಕೊಂಡು ಬರಲು ಹೋಗಿದ್ದ ಬ್ರಾಹ್ಮಣರ ಸಮೂಹವು ಅದೇ ರೀತಿ ಚಿತ್ತೂರಿಗೆ ಕರೆದುಕೊಂಡು ಬರಲು ಹೋಗಿದ್ದ ಬ್ರಾಹ್ಮಣರ ಸಮೂಹವು ನಿದ್ರೆಯಿಂದ ಎಚ್ಚತ್ತು ನೋಡುತ್ತಾರೆ. ಕುಟೀರದಲ್ಲಿ ಮೀರಾಬಾಯಿಯು ಅಥವಾ ಅವಳ ಬಾಲ್ಯದ ಗೆಳತಿ ಲಲಿತಾಬಾಯಿಯು ಸುಳಿವು ಕಂಡು ಬರುವದಿಲ್ಲ. ಆಗ ಅವರು ಮೀರಾಬಾಯಿಯನ್ನು ಹುಡುಕಾಡಲು ಪ್ರಾರಂಭಿಸುತ್ತಾರೆ. ಈ ವಿಷಯ ವೃಂದಾವನದ ತುಂಬೆಲ್ಲ ಹರಡುತ್ತದೆ. ಎಲ್ಲರಿಗೂ ಭಯ ಮತ್ತು ಆಶ್ಚರ್ಯ ಹಾಗೂ ಖೇದ ದುಃಖಿತರಾದವೃಂದಾವನ ದಲ್ಲಿಯ ಸಾಧು ಸತ್ಪುರುಷರು. ಜನಸಾಮಾನ್ಯರು ಮತ್ತು ಮೇಡತಾ ಹಾಗೂ ಚಿತ್ತೂರಿನಿಂದ ಬಂದ ಬ್ರಾಹ್ಮಣರು ಸೇರಿಕೊಂಡು ವೃಂದಾವನದ ಪ್ರದೇಶದಲ್ಲಿ ಶ್ರೀಕೃಷ್ಣ ಪರಮಾತ್ಮನು ಲೀಲಾ ಮಾಡಿದ ಸ್ಥಳಗಳಿಗೆ ಹೋಗಿ ನೋಡಿದರೆ ಅಲ್ಲೆಲ್ಲಿಯೂ ಮೀರಾಬಾಯಿ ಸುಳುಹು ಕಂಡುಬರಲಿಲ್ಲ. ಆಮೇಲೆ ಕೊನೆಗೆ ವೃಂದಾವನದಲ್ಲಿಯ ಗೋಪಾಲನ ಮಂದಿರಕ್ಕೆ ಬಂದು ಬಿಡುತ್ತಾರೆ. ಅಲ್ಲಿ ಅವರು ಗೋಪಾಲನ ಮಂದಿರದ ಎದುರಿಗೆ ಮೀರಾಬಾಯಿಯು ಬಿಟ್ಟಿದ್ದ ಬಟ್ಟೆಗಳನ್ನು ನೋಡುತ್ತಾರೆ. ಆಗ ಅವರು ಕೊನೆಯ ನಿಟ್ಟುಸಿರನ್ನು ಬಿಡುವಂತಾಯಿತು. ಮೀರಾಬಾಯಿ ಮಂದಿರದ ಎದುರಿನಲ್ಲಿ ಬಟ್ಟೆಗಳನ್ನು ಬಿಟ್ಟು ಗೋಪಾಲನಲ್ಲಿ ಸಾಯುಜ್ಯವನ್ನು ಹೊಂದಿರಲಿಕ್ಕೆಬೇಕು ಎಂಬ ಕೊನೆಯತೀರ್ಮಾನಕ್ಕೆ ಅವರು ಬಂದುಬಿಡುತ್ತಾರೆ. ಇದು ಸಹಜವಾದ ಮತ್ತು ವಾಸ್ತವವಾದ ನಿರ್ಣಯವೆಂದು ಕಂಡುಬರುತ್ತದೆ. ಇದು ಒಂದು ಪ್ರತೀತಿ. ಇನ್ನೊಂದು ಪ್ರತೀತಿಯೇನಂದರೆ–ಮೀರಾಬಾಯಿಯು ಬ್ರಾಹ್ಮಣರ ಒತ್ತಾಯಕ್ಕೆ ಮಣಿದು ತನ್ನಜನ್ಮಭೂಮಿಯಾದ ಮೇಡತಾಕ್ಕೆಹೋದಳು ಎಂಬುದು. ಮೀರಾಬಾಯಿಯು ಮೇಡತಾಕ್ಕೆ ಹೋದಮೇಲೆ ಅಲ್ಲಿ ಕೆಲವು ದಿನಗಳವರೆಗೆ ನಿಂತು ಆಮೇಲೆ ತನ್ನ ಕೊನೆಯ ದಿನಗಳನ್ನು ದ್ವಾರಕೆಯಲ್ಲಿ ಕಳೆದಳು ಹಾಗೂ ಅಲ್ಲಿಯೇ ಅವಳು ಶ್ರೀಕೃಷ್ಣ ಪರಮಾತ್ಮನಲ್ಲಿ ಐಕ್ಯಳಾದಳು.

ಮೀರಾಬಾಯಿಯು ವೃಂದಾವನದಲ್ಲಿ ಕೆಲವು ದಿನಗಳವರೆಗೆ ನಿಂತು ಶ್ರೀಕೃಷ್ಣಪರಮಾತ್ಮನ ಬಾಲ್ಯದ ಹಾಗೂ ಯೌವ್ವನದ ಲೀಲೆಗಳನ್ನು ಕಂಡು, ನಂತರ ಅವನು ಕಾಠೇವಾಡದ ನಾಡಿನ ಸಮುದ್ರ ತೀರದಲ್ಲಿ ಸುಂದರವಾದ ಹಾಗೂ ಅನೇಕ ಬಾಗಿಲುಗಳುಳ್ಳ ಒಂದು ಪಟ್ಟಣವನ್ನು ಕಟ್ಟಿಸಿಕೊಂಡು ತನ್ನ ಕೊನೆಯ ದಿನಗಳನ್ನು ಕಳೆಯಲು ಅಲ್ಲಿಗೆ ಹೋಗಿ ಉಳಿದುಕೊಂಡುದನ್ನು ನೆನೆದುಕೊಂಡ ಮೀರಾಬಾಯಿಯು ದ್ವಾರಕಾವತಿಗೆ ಹೋಗಲು ನಿಶ್ಚಯವನ್ನು ಮಾಡಿಕೊಂಡಿದ್ದಳು. ಆ ಪ್ರಕಾರ ತನ್ನ ಯೋಜನೆಯನ್ನು ಕಾರ್ಯಗತ ಮಾಡಲು ತೀರ್ಮಾನಿಸಿ ಇಬ್ಬರೂ ದೊರೆಗಳು ಕಳಿಸಿಕೊಟ್ಟ ಬ್ರಾಹ್ಮಣರನ್ನು ಬರುವುದಿಲ್ಲವೆಂದು ಹೇಳಿ ನಿರಾಶೆಗೊಳಿಸುವ ಬದಲು ಅವರಿಗೆ ತಿಳಿಯದಂತೆ ಹೋಗಿರುವುದು ಸಾಧ್ಯವಿದೆ. ತವರುಮನೆಯ ಬಂಧು ಬಳಗದವರ ಪ್ರೇಮದ ಹಾಗೂ ಅಭಿಮಾನದ ಒತ್ತಾಯ, ಅದೇ ರೀತಿ ಗಂಡನಮನೆಯವರಿಗೆ ಪ್ರಾಯಶ್ಚಿತ್ತದಿಂದ ಜ್ಞಾನೋದಯವಾಗಿ ಮೀರಾಬಾಯಿಯು ಚಿತ್ತೂರಿಗೆ ಬಂದರೆ ತಮಗೆ ಹಿತವಿದೆಯೆಂಬ ಭಾವನೆಯಲ್ಲಿ ಅವರು ಮಾಡುವ ಒತ್ತಾಯ ಇವೆರಡನ್ನೂ ತಪ್ಪಿಸಲು ಮೀರಾಬಾಯಿಯು ವೇಷ ಬದಲಿಸಿಕೊಂಡು ಕೆಲ ದಿನಗಳನ್ನು ದ್ವಾರಕಾನಗರದಲ್ಲಿ ಕಳೆಯುತ್ತಿದ್ದಾಗ ಮೇಡತಾದ ದೊರೆಗಳಿಗೆ ಮೀರಾಬಾಯಿಯು ದ್ವಾರಕಾ ನಗರದಲ್ಲಿರುವುದು ಗೊತ್ತಾಗಿ ಅಲ್ಲಿಗೂ ಅವಳನ್ನು ಕರೆದು ತರಲು ಪ್ರಯತ್ನ ಮಾಡಲು ಬ್ರಾಹ್ಮಣರನ್ನು ಕಳಿಸಿಕೊಟ್ಟ ವಿಷಯವೂ ಪ್ರಚಲಿತವಿದೆ. ಅಲ್ಲಿಗೆ ಹೋದ ಬ್ರಾಹ್ಮಣರು ಮೀರಾಬಾಯಿಯನ್ನು ಕಂಡು ಸ್ವದೇಶಕ್ಕೆ ಮರಳಿ ಬರಲು ಪ್ರಾರ್ಥಿಸಿಕೊಂಡಾಗ ಅವಳು ಬರಲು ಒಪ್ಪದಾಗಲು, ಆ ಬ್ರಾಹ್ಮಣರು ಉಪವಾಸ ಸತ್ಯಾಗ್ರಹವನ್ನು ಪ್ರಾರಂಭಿಸಿದರಂತೆ. ಇದರಿಂದ ನೊಂದುಕೊಂಡ ಮೀರಾಬಾಯಿಯು 'ಸಾಕು ಮಾಡೈ ಇನ್ನು ಲೋಕದಾಟವನು' ಎಂಬಂತೆ ಶ್ರೀಕೃಷ್ಣಪರಮಾತ್ಮನಲ್ಲಿ ಐಕ್ಯವಾದಳು ಎಂಬುದು ಒಂದು. ಮೀರಾಬಾಯಿಯು ಭಕ್ತರಿಗಾಗಿ ಅನೇಕ ಬಾಗಿಲುಗಳನ್ನು ತೆರೆದಿಟ್ಟ ಪಟ್ಟಣವಾದ ದ್ವಾರಕಾದಲ್ಲಿ ತನ್ನ ಕೊನೆಯುಸಿರನ್ನು ಎಳೆದಳೆಂಬುದನ್ನು ಅನೇಕ ಚರಿತ್ರಕಾರರೆಲ್ಲ ಒಪ್ಪಿಕೊಳ್ಳುವರು. ಮೀರಾಬಾಯಿಯ ಅಂತ್ಯವು ೧೫೪೭ ರಲ್ಲಿ ಆಯಿತೆಂದು ಚರಿತ್ರಕಾರರ ಅಭಿಪ್ರಾಯವಿದೆ.

ಮೀರಾಬಾಯಿಯು ವೃಂದಾವನದಿಂದ ಚಿತ್ತೂರಿಗೆ ಇಲ್ಲವೆ ಮೇಡತಾಕ್ಕೆ ಹೋಗಲಿ ಅಥವ ಬಿಡಲಿ, ಆದರೆ ಅವಳು ದ್ವಾರಕಾಕ್ಕೆ ಮಾತ್ರ ಹೋಗಿರಲು ಸಾಕು. ಯಾಕೆಂದರೆ ಶ್ರೀಕೃಷ್ಣಪರಮಾತ್ಮನು ಕೊನೆಯಲ್ಲಿ ದ್ವಾರಕಾ ನಗರವನ್ನು ಕಟ್ಟಿಸಿಕೊಂಡು ಅಲ್ಲಿಗೆ ವೃಂದಾವನದಿಂದ ತನ್ನ ವಾಸ್ತವ್ಯವನ್ನು ಬದಲಿಸಿದನೆಂದು ಮೀರಾಬಾಯಿಗೆ ಗೊತ್ತಿತ್ತು. ಶ್ರೀಕೃಷ್ಣಪರಮಾತ್ಮನು ಚಾರಿತ್ರಿಕ ವ್ಯಕ್ತಿಯಾಗಿ ಆ ರೀತಿ ಬದುಕಿದ್ದುದರಲ್ಲಿ ಅವಳಿಗೆ ತುಂಬಾ ನಂಬುಗೆ. ಅವನ ಜೀವನದ ಒಂದು ಹಂತಿನ ವಾಸ್ತವ್ಯದಲ್ಲಿ ಇದ್ದು, ತನ್ನ ಭಕ್ತಿಯ ಸೇವೆಯನ್ನು ಆ ನಾಡಿನಲ್ಲಿ ಮಾಡಿ ಮುಗಿಸಿ, ಆಮೇಲೆ ಅಲ್ಲಿ ಇರುವದು ಅವಶ್ಯವಿಲ್ಲವೆಂದು ಬಗೆದು, ದ್ವಾರಕೆಯಲ್ಲಿ ಶ್ರೀಕೃಷ್ಣಪರಮಾತ್ಮನ ವಾಸ್ತವ್ಯವಿದೆ ಅಲ್ಲಿಗೆ ಹೋಗಿ ತನ್ನ ಕೊನೆಯ ಭಕ್ತಿಯ ಸೇವೆ ಸಲ್ಲಿಸಬೇಕೆಂದು ಅವಳು ತೀರ್ಮಾನಿಸುವುದು ಸಹಜವಿದೆ. ಇದು ಭಕ್ತಿಯ ಬದುಕಿನ ಒಂದು ರೀತಿ.

——

# ಜೀವನ ಸಮೀಕ್ಷೆ

ಮೀರಾಬಾಯಿಯ ಜೀವನದ ಕೆಲವು ಮಹತ್ವದ ಹಾಗೂ ಚಿತ್ರಹಿಂಸೆಗೊಳಪಟ್ಟ ಘಟನೆಗಳು ಮೀರಾಬಾಯಿಯ ಒಂದು ಪದದಲ್ಲಿ ಉಲ್ಲೇಖಿತವಾದಿರುತ್ತವೆ. ಇಂಥ ಜೀವನ ಚರಿತ್ರ್ಯಾಂಶದ ಸಂಗತಿಗಳನ್ನು ಮಹಾದೇವಿಯಕ್ಕ, ರಾಬಿಯಾ, ಥೆರಿಸಾ, ಬಸವಣ್ಣ, ಜ್ಞಾನದೇವ ಮುಂತಾದವರ ಹೇಳಿಕೆಗಳಲ್ಲಿಯೂ ಗುರುತಿಸಬಹುದ ಗಿದೆ. ಇನ್ನು ಕೆಲವು ಸಂಗತಿಗಳು ಜನರು ಹೇಳಿಕೊಂಡು ಬಂದಿರುವುದೂ ಉಂಟು. ಈ ಎರಡೂ ಮೂಲಗಳು ಅನೇಕ ಸತ್ಪುರುಷರ ಜೀವನ ಚಿತ್ರಣಕ್ಕಾಗಿ ಉಪಯೋಗವುಳ್ಳವುಗಳೆಂದು ಚರಿತ್ರಕಾರರು ಬಳಸಿಕೊಂಡು ಬಂದಿದ್ದಾರೆ.

ಮೀರಾಬಾಯಿಯು ಒಂದು ಪದದಲ್ಲಿ ವಿಕ್ರಮಾದಿತ್ಯ ರಾಣಾನು ಕೃಷ್ಣಸರ್ಪದ ಪೆಟ್ಟಿಗೆಯನ್ನು ಕಳಿಸಿದುದನ್ನು, ವಿಷದ ಬಟ್ಟಲನ್ನು ಕುಡಿಯಲು ಕೊಟ್ಟುದನ್ನು ಮತ್ತು ಮುಳ್ಳುಹಾಸಿಗೆಯ ಮೇಲೆ ಮಲಗಲು ಆಜ್ಞಾಪಿಸಿರುವುದನ್ನು ತಿಳಿಸುತ್ತಾಳೆ. ಇವೆಲ್ಲ ಮೃತ್ಯುದಾಯಕ ಘಟನೆಗಳಿಂದ ಮೀರಾಬಾಯಿಯು ಹೇಗೆ ಪಾರಾದಳೆಂಬುದಕ್ಕೆ ತಾನೇ ಉತ್ತರಿಸಿಯೂ ಬಿಟ್ಟಿದ್ದಾಳೆ – ಶ್ರೀಕೃಷ್ಣನು ಅವಳ ನಿತ್ಯ ರಕ್ಷಕನೆಂದು. ಈ ಬಗೆಯ ದುರ್ಘಟನೆಗಳಿಂದ ಭಕ್ತರು ಪಾರಾಗಿರುವ ಅನುಭವವನ್ನು ಹೇಳುವುದನ್ನು ಕೇಳಿದ್ದೇವೆ. ಇಂಥ ಹೇಳಿಕೆಗಳನ್ನು ಅನೇಕರು ನಂಬದಿರಬಹುದು. ಆದರೆ ಭಕ್ತರು ಮಾತ್ರ ಇಂಥವು ಅಸಂಭವವೆಂದು ಹೇಳಲಾರರು. ರಾಮನಾಮದಲ್ಲಿ ವಿಶ್ವಾಸವಿಟ್ಟ ಗಾಂಧೀಜಿಯವರು ತಮಗಾದ ದೈಹಿಕ ಹಾಗೂ ಮಾನಸಿಕ ತೊಂದರೆಗಳಿಂದ ಅದು ಪಾರು ಮಾಡಿತು ಎಂದು ಹೇಳುತ್ತಾರೆ. ವೈದ್ಯರಿಗೆ ಸಾಧ್ಯವಾಗದ ರೋಗನಿಯಂತ್ರಣವನ್ನು ಗಾಂಧೀಜಿಯವರು ರಾಮನಾಮೋಪಚಾರದಿಂದ ನಿಯಂತ್ರಿಸಿಕೊಂಡುದನ್ನು ಬರೆಯುತ್ತಾರೆ. ಭಕ್ತರ ಇಂಥ ಅನೇಕ ಘಟನೆಗಳನ್ನು ಉಲ್ಲೇಖಿಸಿ ಮೀರಾಬಾಯಿಯು ಈ ಘಟನೆಗಳಿಂದ ಪಾರಾಗಿದ್ದು ಅದು ದೇವರ ಕೃಪೆಯಿಂದ ಎಂದು ತೋರಿಸಬಹುದು.

ಭಕ್ತರ ಜೀವನದಲ್ಲಿ ನಡೆಡ ಈ ಘಟನೆಗಳಿಂದ ದುಷ್ಟ ಹಾಗೂ ಶಿಷ್ಟ ಶಕ್ತಿಗಳಲ್ಲಿ ನಿರಂತರ ಹೋರಾಟವಿದೆಯೆಂದು ಖಚಿತವಾಗುತ್ತದೆ. ಭಕ್ತನು ಹೊಂದಿದ ತೊಂದರೆಯು ದುಷ್ಟಶಕ್ತಿಯ ಭಯಂಕರತೆಯ ಅರಿವನ್ನು ಉಂಟು ಮಾಡುತ್ತದೆ, ಈ ಹೋರಾಟಕ್ಕೆ ಸಿಕ್ಕ ಭಕ್ತನಲ್ಲಿ ಆರ್ತಭಾವೋದ್ದೀಪನಗೊಂಡು ಆತನು ಹಲುಬುವುದು. ಇದು ಕೇಳುಗರಲ್ಲಿ ಶಿಷ್ಟಶಕ್ತಿಯ ದೇವರ ವಿಷಯದಲ್ಲಿ ಅಪನಂಬುಗೆಯನ್ನು ಹುಟ್ಟಿಸುವಂತೆ ಸಾತ್ವಿಕ ಕ್ರೋಧವನ್ನೂ ಕೆರಳಿಸುತ್ತದೆ. ಮೀರಾಬಾಯಿಯ ಜೀವನದುದ್ದಕ್ಕೂ ಇಂಥ ಪ್ರಸಂಗಗಳು ಕಂಡುಬರುತ್ತವೆ. "ಮೆಚ್ಚಿದೆನೆಂದರೆ ನಚ್ಚಿದನೆಂದರೆ ಫಲೆಮಾರುವೋದೆನೆಂದರೆ ತನುವನಲ್ಲಾಡಿಸಿ ನೋಡುವೆ ನೀನು, ಮನವನಲ್ಲಾಡಿಸಿ ನೋಡುವೆ ನೀನು, ಧನವಲ್ಲಾಡಿಸಿ ನೋಡುವೆ ನೀನು, ಇವೆಲ್ಲಕ್ಕೂ ಅಂಜದಿದ್ದರೆ ಭಕ್ತಿಕಂಪಿತ" ದೇವರು ಎಂಬುದನ್ನು ಭಕ್ತರು ಬಲ್ಲರು. ಈ ವಿಶ್ವಾಸದಿಂದ ಅವರು ಈ ಎಲ್ಲ ದೈಹಿಕ, ಮಾನಸಿಕ ಕಷ್ಟ ಕಾರ್ಪಣ್ಯಗಳನ್ನು ಸಹಿಸಿಕೊಂಡು ಜಯಿಸುವ ವಿಶ್ವಾಸದಲ್ಲಿರುವರು. 'ಶಿವಭಕ್ತನಾಗಿ ತನ್ನ ಹಿಡಿದಹೆನೆಂದು ಹೋದರೆ ನುಗ್ಗು ಮಾಡುವ, ನುಸಿಯ ಮಾಡುವ, ಮಣ್ಣ ಮಾಡುವ, ಮಸಿಯ ಮಾಡುವ ಕೂಡಲಸಂಗಮದೇವರ ನೆರೆ ನಂಬಿದನಾದರೆ ಕಡೆಗೆ ತನ್ನಂತೆ ಮಾಡುವ' ನೆಂಬುದು ಭಕ್ತರ ಆದರ್ಶದ ಬದುಕಿನ ರೀತಿ, ಮೀರಾಬಾಯಿಯ ಬದುಕಿನ ಉದ್ದಕ್ಕೂ ಈ ಆದರ್ಶದ ಇರುವು ಕಂಡುಬಂದಂತೆ 'ನೀನೊಲಿದರೆ ವಿಷ ಅಮೃತವಹುದು' ಎಂಬ ಕನಸನ್ನು ನನಸನ್ನಾಗಿ ಮಾಡಿ ತೋರಿಸಿದ ಉತ್ತಮ ಜೀವಂತ ಸಾಕ್ಷ್ಯವು ಅವಳ ಬದುಕು ಎಂಬುದು ಗೊತ್ತಾಗುತ್ತದೆ.

ಭಕ್ತರು ತಮ್ಮ ಜೀವನದಲ್ಲಿ ನಡೆದ ದುರ್ಘಟನೆಗಳು ಆತನ ಪ್ರಸಾದ ವೆಂದೇ ಭಾವಿಸುತ್ತಾರೆ. ಅದೇ ಉಲ್ಲಾಸದಲ್ಲಿ ಅವರು ಇರುತ್ತಾರೆ. ವಿಷವನ್ನು ಕುಡಿದು ಮೀರಾಬಾಯಿ ಸಂತೋಷದಿಂದ ನಕ್ಕು ನಲಿದು ನರ್ತಿಸಿರುವದೆ ಇದಕ್ಕೆ ಸಾಕ್ಷಿ. ಭಕ್ತರು ಇದು ದೇವರ ಲೀಲೆಯೆಂದು ಹೇಳಿದರೆ, ಧಾರ್ಮಿಕ ವಿಧಿ ವಿಧಾನಗಳಾಚರಣೆಯ ಫಲ ಗಳಲ್ಲಿ ವಿಶ್ವಾಸವುಳ್ಳವರು ವಿಧಿ ಅಥವಾ ಕರ್ಮದ ಫಲವೆಂದು ಹೇಳುತ್ತಾರೆ. ಮೀರಾಬಾಯಿಯ ಚರಿತ್ರೆಯನ್ನು ರಾಜಮನೆತನದಲ್ಲಿ ಸಂಭವಿಸಿದ ಘಟನೆಗಳ ಹಿನ್ನೆಲೆಯಲ್ಲಿ ಹಾಗೂ ಆಗಿನ ರಾಜಕೀಯ ವಾತಾವರಣದ ಪ್ರಜ್ಞೆಯಿಂದ ನೋಡಿದ ಚರಿತ್ರಕಾರರು "ರಾಣಾ

ವಿಕ್ರಮಸಿಂಹನ ದೃಷ್ಟಿಯಲ್ಲಿ ಮೀರಾಬಾಯಿ ವೈರಿವರ್ಗದವಳು ಮತ್ತು ಸಾಧು-ಸಂತರು ಗೂಢಚಾರರು ಆಗಿದ್ದರು, ಆದ್ದರಿಂದ ಅವಳ ಹತ್ಯೆಯ ಪ್ರಯತ್ನಗಳೆಲ್ಲ ರಾಜಕೀಯ ಉದ್ದೇಶಗಳಿಂದ ಪ್ರೇರಿತವಾಗಿದ್ದವು." "ರತನ ಸಿಂಹನನಂತರ ಪಟ್ಟಕ್ಕೆ ಬಂದ ವಿಕ್ರಮಾಜೀತ ಮೀರಾಳಿಗೆ ಅವಳು ರಾಜ್ಯಕಾರ್ಯ ದಲ್ಲಿ ಕೈಹಾಕದಿದ್ದರೂ ಉಪಟಳ ಕೊಡಹತ್ತಿದನು" ಎಂದು ಬರೆಯುತ್ತಾರೆ.

ಮೀರಾಬಾಯಿಯ ಜೀವನವು ಭಕ್ತಿಯ ಆದರ್ಶದ ಜೀವನವು. ಭಕ್ತಿಯ ಬದುಕಿನಲ್ಲಿ ವೈಯಕ್ತಿಕವಾಗಿ ಹಾಗೂ ಸಾರ್ವಜನಿಕವಾಗಿ ದೇವರ ಪೂಜೆ, ಭಜನೆ, ನಾಮಸಂಕೀರ್ತನೆ, ಧ್ಯಾನಗಳು ನಡೆಯುತ್ತವೆ. ಈ ರೀತಿಯ ವರ್ತನೆಯು ಸಹಜವಾಗಿ ಅದಮನೀಯವಾಗಿ ನಿರ್ಭಯವಾಗಿ ನಡೆಯುತ್ತದೆ ಹಾಗೂ ಅದು ನಡೆಯಲೇಬೇಕಾದುದು. ಮೀರಾಬಾಯಿಯಲ್ಲಿ ಹೀಗೆ ನಡೆದಿರುವುದು ಕಂಡುಬರುತ್ತದೆ. ರಾಜಮನೆತನದ ಘನತೆ-ಗೌರವಗಳ ಅರಿವುಳ್ಳವರಿಗೆ ಅದನ್ನು ಎತ್ತಿ ಹಿಡಿಯುವಲ್ಲಿ ವಿಶ್ವಾಸವುಳ್ಳವರಿಗೆ ಮೀರಾಬಾಯಿಯ ವರ್ತನೆ ಆಕ್ಷೇಪರ್ಹವಾಗಿ ಕಂಡುಬರುತ್ತದೆ. ಸಮಾಜ ಸುಧಾರಕರಿಗೆ ಆ ನಡತೆಯು ಕ್ರಾಂತಿಕಾರಕವಾಗಿ, ಸಾಮಾಜಿಕವಾಗಿ ಪ್ರಜಾಸತ್ತಾತ್ಮಕ ತತ್ವದ ಅನುಷ್ಠಾನ ವಾಗಿ ಕಂಡುಬರುತ್ತದೆ. ಸತಿಹೋಗುವ ಪದ್ಧತಿಯನ್ನು ವಿರೋಧಿಸಿದ ಸತ್ಯಾಗ್ರಹಿ ಹಾಗೂ ರಾಜರಾಮ ಮೋಹನರಾಯರಂಥ ಸಮಾಜ ಸುಧಾರಕರ ಪುರೋಗಾಮಿ ಎಂದು ಹೇಳಬಹುದು. ವಿರೋಧವಾದ ಹಾಗೂ ಪರವಾದ ಈ ಅಭಿಪ್ರಾಯಗಳಿಗೂ ಭಕ್ತರ ಜೀವನಕ್ಕೂ ಸಂಬಂಧ ಕಲ್ಪಿಸುವ ಅಥವ ಅವರ ಜೀವನವನ್ನು ಅರ್ಥೈಸುವ ಒಂದು ರೀತಿ ಮಾತ್ರ ಇದು ಎಂದ್ಯ ಹೇಳಬಹುದೇ ವಿನಾ ಅವರದು ಭಕ್ತಿಮಾರ್ಗದ ಹೊರತು ಬೇರೇನೇನೂ ಅಲ್ಲ.

ಮೀರಾಬಾಯಿಯ ಪದಗಳ ಅಧ್ಯಯನದಿಂದ ಅವಳ ಭಕ್ತಿಯ ಬದುಕಿನ ವಿವಿಧ ಮುಖಗಳು, ಅನುಭವಗಳು, ಸಿದ್ಧಿಗಳು ಗೊತ್ತಾಗುತ್ತವೆ. ಇಲ್ಲಿ ಚಿತ್ರಿತವಾಗಿರುವುದು ಜೀವನದಲ್ಲಿ ಮೀರಾಬಾಯಿಯು ಎದುರಿಸುತ್ತ ಭಕ್ತಿಯನ್ನು ಎತ್ತಿಹಿಡಿದಿರುವ ದೃಢಭಕ್ತಿಯ ಅಭಿವೃದ್ಧಿಯನ್ನು ತೋರಿಸುವುದು. ಅವಳು ಭಕ್ತಿಯಲ್ಲಿ ವಿವಿಧ ಪವಿತ್ರ ಸ್ಥಳಗಳಿಗೆ ಭೇಟ್ಟಿಯನ್ನಿತ್ತುದುದು ಇಂದಿಗೂ ಸುಪ್ರಸಿದ್ಧ. ಚಿತ್ತೂರಲ್ಲಿರುವ ಮೀರಾ ಮಂದಿರವು, ಉದಯ

ಪುರದಿಂದ ಸುಮಾರು ೩೦ ಇಲ್ಲವೆ ೪೦ ಮೈಲಿಗಳ ಮೇಲಿರುವ ನಾಥದ್ವಾರ ಕ್ಷೇತ್ರವು ಮೀರಾಬಾಯಿಯು ಸರ್ವಮಾನ್ಯ ಪೂಜ್ಯಳಾಗಿದ್ದಳು ಎಂದು ತೋರಿಸುವುದು. ಇಂದಿಗೂ ಅವು ಜನಮನೋಮಂದಿರದ ಆರಾಧ್ಯ ದೇವತೆಯಾಗಿ ಅಲ್ಲಿ ಸೇವೆಯನ್ನು ಜನರಿಂದ ಮಾಡಿಸಿಕೊಳ್ಳುತ್ತಿರುವುದರ ಜೀವಂತ ಸಾಕ್ಷಿಗಳಾಗಿವೆ. ಭಾರತೀಯರು ಅವಳ ಗೆಜ್ಜೆಯ ನಾದವನ್ನು, ಪ್ರೇಮ ಗೀತಗಳನ್ನು ಇಂದಿಗೂ ಅಲ್ಲಿ ಆಲಿಸಿದ ಸಂತೋಷವನ್ನು, ಅವಳ ಭಕ್ತಿಯ ಆನಂದದಲ್ಲಿ ಪಾಲುಗೊಳ್ಳುವದನ್ನು ನೋಡಬಹುದು.

ಚಿತ್ತೂರಿನ ಅಥವಾ ಮೇವಾಡದ ಅರಸು ಮನೆತನದವರು ಅವಳ ಹೆಸರನ್ನು ಹೇಳದಂತೆ ನಡೆಸಿದ ಪ್ರಯತ್ನದ ಸಾಕ್ಷಿಯಾಗಿ ಚರಿತ್ರಕಾರನಿ[illegible] ಯಾವ ದಾಖಲೆಗಳೂ ಮೀರಾಬಾಯಿಯ ಬಗ್ಗೆ ಇಲ್ಲದಿರುವುದನ್ನು ತಿಳಿ[illegible] ವ್ಯಥೆಪಡುತ್ತಾರೆ. ಅಂದಿನ ಸಾಹಿತಿಗಳು ಅವಳ ಉಲ್ಲೇಖವನ್ನು ಮಾ[illegible] ದಿರುವುದರಿಂದ ಸಾಹಿತ್ಯ ಚರಿತ್ರಕಾರರು ಅವಳ ಬಗ್ಗೆ ಮೌನ ತಾಳಿ ತಲೆತಗ್ಗಿ[illegible] ಬೇಕಾಗಿದೆ. ಆದರೇನು ಮೀರಾಬಾಯಿಯ ಭಕ್ತಿಗೀತಗಳು ಭಾರತದಾದ್ಯಂ[illegible] ಇಂದು ಭಾರತೀಯರ ಬಾಯಲ್ಲಿ ನಲಿದಾಡುತ್ತವೆ. ಗಾಯನದ ಮನೆತನ[illegible] ಳೆಂದು ಸುಪ್ರಸಿದ್ಧವಾದ ಇಂದೂರ ಹಾಗೂ ಗ್ವಾಲ್ಹೇರ ಪರಂಪರೆಗಳವರು ಮೀರಾಬಾಯಿ ತನ್ನ ಭಜನೆಗಳಿಗೆ ಹಚ್ಚಿದ ರಾಗಗಳನ್ನೂ, ಗಾಯಕರ ತಮ್ಮ ಹೊಸ ರಾಗಗಳನ್ನು ಅವಳ ಪದಗಳಿಗೆ ಹಚ್ಚಿ, ಹಾಡಿ ಗಂಧರ್ವ ವಿದ್ಯಾಲೋ[illegible] ದಲ್ಲಿ ಅಮರಗೊಳಿಸಿದ್ದಾರೆ. ಶ್ರೇಷ್ಠ ಗಾಯಕಿ, ನರ್ತಕಿ ಮತ್ತು ಭಕ್ತಿಗೀತಗ[illegible] ಕರ್ತೃವಾಗಿ ಮೀರಾಬಾಯಿ ಈ ವಿದ್ಯೆಗಳಿಗೆ ಮಹಾ ಪೋಷಕಳೂ, ಉದ್ಧಾ[illegible] ಕಳೂ ಆಗಿದ್ದಾಳೆ; ಮೀರಾಬಾಯಿ ಅಂದು ಹಾಡುತ್ತಿರುವದನ್ನು ಅಂದಿ[illegible] ಜನಾಂಗವು ಕೇಳಿ ಸಂತೋಷಗೊಂಡುದರ ಸಾಸಿರ ಸಾಸಿರ ಪಾಲು[illegible] ಜಗತ್ತಿನಾದ್ಯಂತ ಕೇಳಿ ಕೇಳಿ ಇಂದು ಆನಂದಭಾಷ್ಪಗಳನ್ನು ಸುರಿಸುತ್ತಾರೆ. ಅವಳ ಭಕ್ತಿಗೀತೆಗಳು ನಿತ್ಯ ನವೀನ. ಭಾರತೀಯ ಅಮೃತ ಕುಮಾ[illegible] ಮೀರಾಬಾಯಿ. ಇಂದಿನ ದುಃಖಿತ ಲೋಕಕ್ಕೆ ಚಂಚಲ ಚಿತ್ತಿನ ಮಾನ[illegible] ಕುಲಕ್ಕೆ ಮೀರಾಬಾಯಿಯ ಬದುಕು ನಂದಾದೀಪ; ವಿಶ್ವಕ್ಕೆ ಭಾರತವು[illegible] ಯಿತ್ತ ಅತ್ಯಮೂಲ್ಯವಾದ ಜೀವರತ್ನ.

# *ಪ್ರೇಯಸಿ ಮಾಯಾದೇವಿ

ಮಹಾದೇವಿಯಕ್ಕ ಮತ್ತು ಮಾಯಾದೇವಿ ಎಂಬ ಎರಡು ಹೆಸರುಗಳಲ್ಲಿ ಮಹಾದೇವಿಯಕ್ಕ ಎಂಬುದು ಚಿರಪರಿಚಿತ; ಮಾಯಾದೇವಿಯೆಂಬುದು ಅಷ್ಟು ಪರಿಚಿತವಲ್ಲ, ಚಾಮರಸನ ಪ್ರಭುಲಿಂಗ ಲೀಲೆಯನ್ನು ಓದಿದವರಿಗೆ ಅಥವ ಮಾಯೆಯ ಆಟ ಎಂಬ ಡಬ್ಬಿನ ಆಟ ನೋಡಿದವರಿಗೆ ಮಾತ್ರ ಮಾಯಾದೇವಿಯ ಪರಿಚಯ. ಈ ಎರಡು ಹೆಸರುಗಳು ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿರ ಬೇಕಾದಂಥವು; ಭಕ್ತಿಯ ಚರಿತ್ರೆಯಲ್ಲಿ ಇವೆರಡು ಹೆಸರುಗಳಿಗೆ ಮಹತ್ವದ ಸ್ಥಾನವಿದೆ. ಹೀಗೆ ತಿಳಿಸಿದಾಗ ಓದುಗರು ಮಹಾದೇವಿಯಕ್ಕಗಳ ಹೆಸರನ್ನು ಒಪ್ಪಿಕೊಂಡಂತೆ ಮಾಯಾದೇವಿಯ ಹೆಸರು ಅಷ್ಟು ಮಹತ್ವದ್ದೆಂದು ಒಪ್ಪಿಕೊಳ್ಳಲಾರರು. ಇದಕ್ಕೆ ಕಾರಣವೆಂದರೆ— 'ಮಾಯಾ' ಎಂಬ ಪದವು ಅಲ್ಲಿರುವುದು ಒಂದು ಕಾರಣವಾದರೆ, ಮಾಯಾದೇವಿಯು ಜನಿಸಿದಾಗ ಋಷಿ ಮುನಿಗಳು ಸಮಾಧಿಯಿಂದ ಹೊರಬಂದರು ಅಂದರೆ ವಿಕಾರ ವಶರಾದರು ಎಂದು ಚಾಮರಸನು ಬರೆದದ್ದು ಇನ್ನೊಂದು ಕಾರಣ. ಚಾಮರಸನು ಹಾಗೆ ಬರೆದುದ್ದರ ಅರ್ಥವೆಂದರೆ, ಆ ಮಗು ಬಹಳ ಸುಂದರವಾಗಿತ್ತೆಂದು ಅಥವ ಅವಳನ್ನು ನೋಡಿದವರು ಮೋಹಕ್ಕೊಳಗಾಗುತ್ತಿದ್ದರೆಂಬುದು. ಇದು ಅವಳ ದೋಷವೊ, ನೋಡುವವರ ದೋಷವೊ ಎಂಬುದನ್ನೂ ಈ ಸಂದರ್ಭದಲ್ಲಿ ಪ್ರಾಜ್ಞರು ಅಥವ ತತ್ತ್ವಬುಭುತ್ಸುಗಳು

---

* ಇದೇ ಲೇಖಕರು ಬರೆದ ಚಾಮರಸನ ಅಮನಸ್ಕಕಾವ್ಯ ಎಂಬ ಪುಸ್ತಿಕೆಯನ್ನು ವೀರಶೈವ ಕವಿಗಳು ಭಾರತೀಯ ಕಾವ್ಯಸಿದ್ಧಾಂತಕ್ಕೆ ಕೊಟ್ಟ ನವೀನ ಸಿದ್ಧಾಂತದ ಪರಿಚಯಕ್ಕಾಗಿ, ಪ್ರಭುಲಿಂಗಲೀಲೆ ಅದೇಕೆ ಅಮನಸ್ಕಕಾವ್ಯವಾಗಿದೆಯೆಂಬುದನ್ನು ತಿಳಿದುಕೊಳ್ಳುವದಕ್ಕಾಗಿ, ಮಹಾದೇವಿಯಕ್ಕ, ಮಾಯಾದೇವಿ, ಬಸವರಾಜನ ರಾಜಯೋಗವೆಂದರೇನು, ಹೀಗೆ ಹಲವಾರು ಮಹತ್ವದ ವಿಚಾರಗಳನ್ನು ಅರಿತುಕೊಳ್ಳಲು ಓದಿನೋಡಬಹುದು, ಪ್ರಭುಲಿಂಗಲೀಲೆ ಎಂಬ ಪೂರ್ತಿ ಕಾವ್ಯವನ್ನು ಕುರಿತು ಬಂದ ಪ್ರಪ್ರಥಮ ಕೃತಿಯಿದು.

ಪರಾಮರ್ಶಿಸಬೇಕಾಗುತ್ತದೆ. ಹಾಗೆ ನೋಡಿದರೆ ಪ್ರಭುದೇವರು ಹೇಳು ವಂತೆ ಮನದ ಮುಂದಣ ಆಶೆಯೆ ಮಾಯವೇ ವಿನಾ, ಹೊನ್ನುಮಾಯೆ ಯಲ್ಲ, ಹೆಣ್ಣು ಮಾಯೆಯಲ್ಲ, ಮಣ್ಣು ಮಾಯೆಯಲ್ಲ. ಚಾಮರಸನ ವರ್ಣ ನೆಯ ಹಿಂದಿರುವ ಧ್ವನಿ ಆ ಹೆಂಗೂಸು ಅತ್ಯಂತ ಸುಂದರ ತಮ. ಇಂತು ಅರ್ಥೈಸಿಕೊಳ್ಳಬೇಕಷ್ಟೆ. ಮಹಾದೇವಿಯಕ್ಕ ಮತ್ತು ಮಾಯಾದೇವಿಯರು ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಚಿತ್ರಿತಗೊಂಡ ಆದರ್ಶ ವ್ಯಕ್ತಿಗಳೆ. ಇವರ ಜೀವನವನ್ನು ಪ್ರಭುಲಿಂಗಲೀಲೆಯಲ್ಲಿ ಚಿತ್ರಿಸಿದ್ದು, ಅದರಾಧಾರದಿಂದ ಅರ್ಥೈಸಿಕೊಳ್ಳುವದನ್ನು, ಈ ಚಿಕ್ಕ ಲೇಖನದಲ್ಲಿ ನೋಡಬಹುದು. ಇಲ್ಲಿ ಪ್ರಬಂಧದ ಪ್ರಾರಂಭವು ಶೀರ್ಷಿಕೆಗನುಗುಣವಾಗಿರದೆ **ಪ್ರಭುಲಿಂಗಲೀಲೆ** ಯಲ್ಲಿ ಪ್ರತಿಪಾದಿಸಿದ ವಿಷಯಕ್ಕನುಗುಣವಾಗಿದೆ.

## ಮಾಯಾದೇವಿ ಯಾರು ?

ಚಾಮರಸ ಮಹಾಕವಿ, ಮತ್ತು ಹರಿಹರ ಮಹಾಕವಿಗಳಿಬ್ಬರೂ ಪ್ರಭು ದೇವರ ಚರಿತ್ರೆಯನ್ನು ಚಿತ್ರಿಸಿದ್ದಾರೆ. ಹರಿಹರ ಮಹಾಕವಿಯು ಪ್ರಭು ದೇವರ ರಗಳೆಯಲ್ಲಿ ಪ್ರಭುದೇವರ ಜೀವನವನ್ನು ಚಿತ್ರಿಸುವಾಗ, ಅವರ ಜೀವನದಲ್ಲಿ ಪರಿವರ್ತನೆಯಾಗಲು ಕಾರಣವೊಂದಿದೆಯೆಂದು ತೋರಿಸು ತ್ತಾನೆ. ಈ ಕಾರಣವೆಂದರೆ–ಪ್ರಭುದೇವರು ಕಾಮಲತೆಯೆಂಬ ಒಬ್ಬ ಸುಂದರ ಕನ್ನೆಯನ್ನು ಲಗ್ನವಾಗಿದ್ದರು. ಅವಳು ಅಕಾಲಮೃತ್ಯುವಿಗೆ ತುತ್ತಾಗುವಳು. ಈ ದುರ್ಘಟನೆಯು ಆವರ ಜೀವನದಲ್ಲಿ ಪರಿವರ್ತನೆ (conversion) ಆಗಲು ಕಾರಣವಾಯಿತು. ಪ್ರಭುದೇವರಲ್ಲಿ ಒಮ್ಮಿಂ ದೊಮ್ಮೆ 'ದಿವ್ಯಚುಕ್ಷು' ತೆರೆಯುತ್ತದೆ. ಹೀಗೆ 'ದಿವ್ಯಚಕ್ಷು' ತೆರೆದ ಒಂದೆ ರಡು ಉದಾರಣೆಗಳನ್ನಿಲ್ಲಿ ಹೆಸರಿಸಬಹುದು. ಕವಿಕಾಳಿದಾಸ, ಮಲ್ಹಣ ಕವಿ, ಸಂತ ತುಳಸೀದಾಸ, ಮತ್ತು ರಾಮಕೃಷ್ಣ ಪರಮ ಹಂಸರು. ಕವಿಕಾಳಿದಾಸ ನಲ್ಲಿ ಪ್ರತಿಭಾಚಕ್ಷು ದೆರೆಯಲು ಅವನ ಪ್ರೇಯಸಿಕಾರಣ. ಮಲ್ಹಣ ಕವಿ ಯಲ್ಲಿ 'ದಿವ್ಯಚಕ್ಷು' ತೆರೆಯಲು ವೇಶೆಯಾದ ಮಲುಹಣೆಯ ಒಂದು ಮಾತು ಕಾರಣ. ಸಂತ ತುಳಸೀದಾಸನಲ್ಲಿ 'ದಿವ್ಯಚಕ್ಷು' ತೆರೆಯಲು ಆತನ ಪತ್ನಿಯ ಒಂದು ಮಾತು ಸಾಕಾಯಿತು. ರಾಮಕೃಷ್ಣ ಪರಮ ಹಂಸರಲ್ಲಿ

ಸೌಂದರ್ಯ ಸಮಾಧಿ ಸ್ಥಿತಿಯುಂಟಾಗಲು ಮಳೆಗಾಲದ ಕಪ್ಪುಮೋಡಗಳ ಹಿನ್ನೆಲೆಯಲ್ಲಿ ಹಾರಿದ ಬಲಾಕ ಪಂಕ್ತಿಯು ಕಾರಣ. ಇವು ಹರಿಹರನು ಚಿತ್ರಿಸಿದ ಘಟನೆಯನ್ನು ನೆನಪಿಗೆ ತರುತ್ತವೆ. ಚಾಮರಸನು ಚಿತ್ರಿಸಿದ ಘಟನೆ ಬೇರೆಯೇ ಇದೆ. ಪ್ರಭುಲಿಂಗ ಲೀಲೆಯ ಪ್ರಕಾರ ಪ್ರಭು ದೇವರ 'ದಿವ್ಯ ಚಕ್ಷು' ವುಳ್ಳವರೆ, ಅದು ಜಗತ್ತಿಗೆ ಪರಿಚಯವಾಗಲು ಮಾಯಾದೇವಿಯ ಸಂಪರ್ಕ ಒಂದು ಪ್ರಸಂಗ ಮಾತ್ರ. ಚಾಮರಸನಲ್ಲಿ ಪ್ರಭುದೇವರು ಆಚಾರ್ಯ. ಮದ್ದಳೆಯ ಆಚಾರ್ಯನಾಗಿ ಮಧುಕೇಶ್ವರ ದೇವಾಲಯವನ್ನು ಪ್ರವೇಶಿಸಿದ ಪ್ರಭುದೇವರು ಸಗುಣಭಕ್ತಿ ಮತ್ತು ನಿರ್ಗುಣ ಭಕ್ತಿಗಳ ಮಹತ್ವ ಪ್ರತಿಪಾದಿಸಲನುವಾದ ರಾಜಯೋಗಿಯೋತ್ತಮನಾಗಿ ಕಂಡುಕೊಳ್ಳುವನು. ಹರಿಹರದೇವ ಕಾಮಲತೆಯ ಬಗ್ಗೆ ವಿವರವನ್ನೇನೂ ತಿಳಿಸುವದಿಲ್ಲ. ಆದರೆ ಚಾಮರಸನು ಮಾಯಾದೇವಿಯ ಜೀವನದ ವಿವರವಾದ ಚಿತ್ರವನ್ನು ಚಿತ್ರಿಸಿದ್ದಾನೆ.

ಹರಿಹರ ಮತ್ತು ಚಾಮರಸರು ಮಹಾದೇವಿಯಕ್ಕನ ಜೀವನವನ್ನು ಚಿತ್ರಿಸಿದವರೆ. ಇವರೀರ್ವರೂ ಮಹಾದೇವಿಯಕ್ಕನ ಜೀವನ ಚಿತ್ರವನ್ನು ಕೊಟ್ಟು ಕುತೂಹಲಕಾರಿಯಾದ ಘಟನೆಗಳನ್ನು ಎತ್ತಿ ತೋರಿಸಿದ್ದಾರೆ. ಮಹಾದೇವಿಯಕ್ಕನ ತಂದೆ ತಾಯಂದಿರು ಶಿವಭಕ್ತರು. ಶಿವಭಕ್ತಿಯಿಂದ ಪಡೆದ ಮಗಳು ಸಹಿತ ಶಿವಭಕ್ತೆಯಾಗಿ ನಳನಳಿಸಿ ಬೆಳೆದವಳೆ. ಮಹಾದೇವಿಯಕ್ಕನ ಜೀವನದಲ್ಲಿ ನಡೆದ ಘಟನೆಯಂಥ ಘಟನೆಗಳು ಅನೇಕ ಭಕ್ತರ ಜೀವನದಲ್ಲಿ ಜರುಗಿರುವವು. ಇಲ್ಲಿ ಸ್ಮರಣಾರ್ಹ. ಇವರಲ್ಲಿ ಕೆಲವರೆಂದರೆ ಕಾರಿಕಾಲಮ್ಮ, ಮೀರಾಬಾಯಿ. ಕಾರಿಕಾಲಮ್ಮ ತಮಿಳುನಾಡಿನಲ್ಲಾದ ಶಿವಭಕ್ತೋತ್ತಮಳು. ಇವಳು ವಿವಾಹಿತಳು. ಕಾರಿಕಾಲಮ್ಮ ಭಕ್ತಿಗೆ ಹೆಸರಾದಂತೆ ರೂಪಲಾವಣ್ಯದಲ್ಲಿಯೂ ಹೆಸರಾದವಳೆ. ಇವಳ ರೂಪಾತಿಶಯಕ್ಕೆ ಮರುಳಾದ ಕಾಮುಕರು ಇವಳಿಗೆ ತೊಂದರೆಕೊಡಲನುವಾಗಲು, ಆ ತೊಂದರೆಯಿಂದ ಪಾರಾಗಲು ದೇವೋನ್ಮಾದಿನಿ ಕಾರಿಕಾಲಮ್ಮ ತಾನು ವಿರೂಪಗೊಂಡು ದಿಗಂಬರೆಯಾಗಿ ದೇವರ ಸೇವೆಗೆ ತಲೆಕೆಳಗಾಗಿ ಕೈಗಳ ಮೇಲೆ ನಡೆಯುತ್ತ ನೋಡುವವರಿಗೆ ಬೀಭತ್ಸ ಉಂಟಾಗುವಂತೆ ಬದುಕಿದವಳು. ಈ ವೈರಾಗ್ಯ ವೀರವೈರಾಗ್ಯ. ಇದು ಬರಲು ಪರಪ್ರಾಪ್ತ

ದುರ್ನಡತೆಯಿಂದ, ದೇವರ ಮೇಲೆ ಅತಿಶಯುವಾದ ಪ್ರೀತಿಯಿಂದ ಒಂದು ಕ್ಷಣದಲ್ಲಿ ಜೀವನ ಕ್ರಮವೇ ಬದಲುಗೊಳ್ಳುವಂತಾಯಿತು. ಮೀರಾಬಾಯಿ ಅರಸುಕುಮಾರಿ, ಸುಕುಮಾರಿ. ವೀರರಜಪೂತನ ವಾತ್ಸಲ್ಯಕುವರಿ, ಅತ್ಯಂತ ಅತ್ಯಂತ ಸುಂದರಿ. *ಸತಿಹೋಗುವ ಪರಂಪರೆಯನ್ನು ಚಾಚೂ ತಪ್ಪದೆ ಅನುಸರಿಸುವ ರಾಣಾ ರಜಪೂತ ಮನೆತನದ ಸೊಸೆ. ಆದರೆ ಮೀರಾಬಾಯಿಯನ್ನು ಸತಿಹೋಗಲು ಅವರತ್ತೆ, ಮೈದುನರು ಒತ್ತಾಯಿಸಿದರೂ ಕೂಡ ಅವಳ ಪತಿಯ ತಂದೆ ಹಾಗೂ ಮಾವನಾದ ದೊರೆ ಮಾತ್ರ ಅದು ಅವಳಿಚ್ಛೆಗೆ ಬಿಟ್ಟುಕೊಟ್ಟುದು ಎಂದು ಹೇಳಿ, ಅವಳಿಗೆ ಬದುಕುವ ಸ್ವಾತಂತ್ರ್ಯಕೊಟ್ಟ. ಇದಕ್ಕೂ ಪೂರ್ವದಲ್ಲಿ ಅಂದರೆ ಅವಳು ತನ್ನ ತಾಯಿಯ ಮಡಿಲಲ್ಲಿ ಆಡುವ ಸಮಯದಲ್ಲಿ ನಡೆದ ಘಟನೆಯು ಗಮನಾರ್ಹವಾದುದು. ತನ್ನ ತಾಯಿಯ ಬಗಲಿಲ್ಲ ಕೂತುಕೊಂಡು ಮದುವೆಯ ಮೆರವಣಿಗೆಯನ್ನು ತಮ್ಮ ಮನೆಯ ಮಹಡಿಯ ಮೇಲಿನಿಂದ ನೋಡುತ್ತಿದ್ದಾಗ ತನ್ನ ತಾಯಿಯನ್ನು ಕುರಿತು ಮಾಡಿದ ಪ್ರಶ್ನೆ; ಅಮ್ಮಾ ನನ್ನ ಮದುಮಗ ಎಲ್ಲಿದ್ದಾನೆ? ಎಂಬುದು. ಅದಕ್ಕೆ ತಾಯಿ ತಮಾಷೆಗಾಗಿ ನಿನ್ನ ವರ ಗಿರಿಧರಗೋಪಾಲ ಎಂದು ಹೇಳಿದಳು. ಅಂದಿನಿಂದಲೇ ಅವಳು ಗಿರಿಧರಗೋಪಾಲನ ಪತ್ನಿಯಾಗಿ ಬಿಟ್ಟಳು. ಆಟ ಆಡುವಾಗ, ಪೂಜೆಮಾಡುವಾಗ ಗಿರಿಧರಗೋಪಾಲನೇ ಅವಳ ಕಣ್ಮಣಿ, ಪೂಜಾಮೂರ್ತಿ, ಅವನಿಗಾಗಿ ಜೀವನವನ್ನು ಮುಡಿಪಿಟ್ಟ ಬಾಲ ತಪಸ್ವಿ. ಮೀರಾಬಾಯಿಯನ್ನು ಜುಲುಮೆಯಿಂದ ಲಗ್ನಮಾಡಿಕೊಟ್ಟರು ಆ ದೇವೋನ್ಮಾದಿನಿ ಪತಿ. ಮನೆಗೆ ಹೋಗುವಾಗ ಕೂಡ ಪರೀಹ ಸಂತ ಭಿಕ್ಷುವಿನಿಂದ ಪಡೆದ ಗಿರಿಧರಗೋಪಾಲನ ಮೂರ್ತಿಯನ್ನೂ ತನ್ನ ಜೊತೆಯಲ್ಲಿ ತೆಗೆದುಗೊಂಡು ಹೋದಳು ಬಾಲಭಾವದ ಮೇಲೆ ತಾಯಿಯ ಒಂದು ಮಾತು ಮಹಾಮಂತ್ರೋಪದೇಶದಂತೆ ಪರಿಣಾಮವಾಯಿತು, ಆ ಘಳಿಗೆಯಲ್ಲಿ

* ಶತಿಹೋಗುವ ಪದ್ಧತಿ ರಜಪೂತ ಅರಸು ಮನೆತನಗಳಲ್ಲಿ ಎಂದು ಪ್ರಾರಂಭವಾಯಿತೆಂಬುದು ಹೇಳುವದು ಕಠಿಣ. ಉತ್ತರ ದೇಶದಲ್ಲಿ ಪ್ರಾರಂಭವಾದ ಈ ಪದ್ಧತಿ ಅಂಬಿಗರ ಚೌಡಯ್ಯ ಶಿವಶರಣನಿಗೂ ಗೊತ್ತಿತ್ತು. ಆತನು ತನ್ನ ಒಂದು ವಚನದಲ್ಲಿ 'ಸತಿ ಹೋಗುವ' ಪದ್ಧತಿಯ ಉಲ್ಲೇಖವನ್ನು ಮಾಡಿರುವುದು ಕುತೂಹಲಕಾರಿಯಾಗಿದೆ.

ವೀರಾಬಾಯಿಯ ಜೀವನ ಕ್ರಮವೇ ಬದಲಾಗಿ ಹೋಯಿತು. ಇದು ಮಹಾಪರಿವರ್ತನೆಯ ಕ್ಷಣ. ಇಲ್ಲಿ ಉದ್ಧರಿಸಿದ ಘಟನೆಗಳನ್ನು ಸ್ಮರಿಸುವಂಥ ಘಟನೆಗಳು ಸೂಫೀ ಹಾಗೂ ಕ್ರೈಸ್ತಅನುಭಾವಿಗಳ ಜೀವನದಲ್ಲೂ ಉಂಟು. ಮಹಾದೇವಿಯಕ್ಕನ ಜೀವನದಲ್ಲಿ ಇಂಥ ಘಟನೆಯೂ ಒಂದಿದೆ. ಸಾತ್ವಿಕ ಸುಂದರ ಭಕ್ತಳಾದ ಮಹಾದೇವಿಯಕ್ಕ ದಿನೇ ದಿನೇ ಬೆಳೆಯ ತೊಡಗಿದಳು. ವೀರಶೈವಾಗಮ ನಿಪುಣೆ, ವೀರಶಿವಭಕ್ತಿ ತಂತ್ರಜ್ಞೆ. ವೀರಶೈವ ಭಕ್ತಿಭಾವೋದ್ದೀಪನಗೊಂಡ ಮಹಾದೇವಿಯಕ್ಕಳಿಗೆ ಶಿವನೇ ತನಗೆ ಪತಿಯಾಗಬೇಕೆಂದು ಬಾಲ್ಯದ ಹೆಬ್ಬಯಕೆಯೂ ಅವಳ ರೂಪಲಾವಣ್ಯ ಯೌವ್ವನದೊಡನೆ ಬೆಳೆದಿತ್ತು. ಅವಳ ರೂಪರಾಶಿಯನ್ನು ನೋಡಿ ಮರುಳಾದ ಆ ಊರಿನದೊರೆ ಕೌಶಿಕ (ಅಥವಾ ಡಾ. ಎಂ. ಚಿದಾನಂದ ಮೂರ್ತಿಯವರು ಗುರುತಿಸಿದ ಕಸಪಯ್ಯ) ಲಗ್ನವಾಗಬೇಕೆಂದು ಬಯಸಿದ, ಅವಳ ಮನವೊಲಿಸಲು ತಂತ್ರವನ್ನು ಬಳಸಿದ. ಕೊನೆಗೆ ಒತ್ತಡವನ್ನೂ ತಂದ. ಮದುವೆಯೂ ಜುಲುಮೆಯಿಂದಲೇ ಆಯಿತೆನ್ನಿ. ಈ ಒತ್ತಾಯದ ಲಗ್ನವನ್ನು ತನ್ನ ವಚನಗಳಲ್ಲಿ ಅಭಿವ್ಯಕ್ತಗೊಳಿಸಿದ್ದಾಳೆಂದು ಸಂಶೋಧಕರು ಗುರುತಿಸುತ್ತಾರೆ. ಅವಳ ಶಿವಭಕ್ತಿ, ದಾಸೋಹಗಳಿಗೆ ಚ್ಯುತಿ ಬಂದಾಕ್ಷಣವೆ ವೀರ ವೈರಾಗ್ಯ ಜಾಗೃತವಾಗಿ ಉಟ್ಟಬಟ್ಟೆಯನೆ ತೊರೆದು ದಿಗಂಬರೆಯಾಗಿ ಅರಮನೆಯಿಂದ ಹೊರಬೀಳುತ್ತಾಳೆ. ಕಾರಿಕಾಲಮ್ಮೆಯಂತೆ ಮಹಾದೇವಿಯಕ್ಕನೂ ದಿಗಂಬರವೆ ದಿವ್ಯಾಂಬರವೆಂದು ಹೊರಟವಳೆ. ಇದು ಮಹಾದೇವಿಯಕ್ಕನ ಜೀವನದಲ್ಲಿ ಮಹಾಬದಲಾವಣೆಗೆ ಕಾರಣವಾದ 'ದಿವ್ಯಕ್ಷಣ'.

ಇಲ್ಲಿ ಉದ್ಧರಿಸಿದ ಪುರುಷರ ಹಾಗೂ ಸ್ತ್ರೀಯರ ಜೀವನದಲ್ಲಿಯ ಪರಿವರ್ತನೆಯ ಉದಾಹರಣೆಗಳು ಈಗ ನಮಗೆ ಚಿರಪರಿಚಿತ. ಮಾಯಾದೇವಿಯ ಜೀವನದಲ್ಲಿ ಇಂಥ ಘಟನೆಯೇನಾದರೂ ಸಂಭವಿಸಿತೇ ? ಎಂದು ತಿಳಿದುಕೊಳ್ಳುವ ಕುತೂಹಲ ನಮ್ಮಲ್ಲಿ ಸಹಜವಾಗಿ ಜಾಗೃತವಾಗುತ್ತದೆ. ಈ ಬಗ್ಗೆ ಚಾಮರಸಕವಿ ಏನು ಹೇಳುತ್ತಾನೆಂಬುದನ್ನಾಲಿಸೋಣ. ಮಾಯಾದೇವಿಯ ತಂದೆ ತಾಯಿಗಳಾದ ಮಮಕಾರ ಮೋಹಿನಿಯರು ಅರಸು ದಂಪತಿಗಳು. ಅವರಿಗೆ ಮಕ್ಕಳಿರಲಿಲ್ಲ. ಆಗ ಅವರು :

ಇವರ ಮಕ್ಕಳ ಬಯಸಿ ಭರದಲಿ ।
ವಿವಿಧ ಗೌರೀವ್ರತವ ಮೊದಲಾ ।
ದವನು ನಾನಾ ಶಕ್ತಿದೇವತೆಗಳ ಸಮೂಹವನು।
ಶಿವ ಪದಪ್ರಾಂತವನು ಸಾರದೆ ।...

ಜಡದೈವಗಳನು ಆರಾಧಿಸಿದ್ದನ್ನು ಚಾಮರಸ ಹೇಳುತ್ತಾನೆ. ಕೊನೆಗೆ ಪಾರ್ವತಿ ಇವರ ಭಕ್ತಿಗೆ ಮೆಚ್ಚಿ ಅವರುದರದಲಿ ತಾನೇ ಜನಿಸುತ್ತಾಳೆ. ಅವಳ ತಾಮಸ ಸ್ವರೂಪದ ಅವತಾರವೆಂದು ಚಾಮರಸ ಚಿತ್ರಿಸಿ, ಅವಳು ಕಾರಣ ಕನ್ಯೆ ಎಂದು ಹೇಳುತ್ತಾನೆ. ಇದು ಗಮನೀಯ.

ಮಾಯಾದೇವಿಯ ತಂದೆ ತಾಯಿಗಳ ಭಕ್ತಿಗೂ, ಮಹಾದೇವಿಯು ತಂದೆ ತಾಯಿಗಳ ಭಕ್ತಿಗೂ ಸೈದ್ಧಾಂತಿಕ ಅಂತರವಿದೆ. ಮಾಯಾದೇವಿಯ ತಂದೆ ತಾಯಿಗಳು ಮಧುಕೇಶ್ವರನಾಮದ ಶಿವನ ಭಕ್ತರು. ಆದರೆ ಮಕ್ಕಳಿಗ ಲೆಂದು ಕ್ಷುದ್ರ ದೇವತೆಗಳನ್ನೂ, ಅನೇಕ ವ್ರತಗಳನ್ನೂ ಆರಾಧಿಸಿದವರು, ಆಚರಿಸಿದವರು, ಮಹಾದೇವಿಯಕ್ಕನ ತಂದೆ ತಾಯಿಗಳಾದರೂ ಶಿವಭಕ್ತರೆ. ಅವರು ಮಕ್ಕಳಿಗಾಗಿ ಶಿವನಲ್ಲದೆ ಅನ್ಯದೈವವನ್ನಾರಾಧಿಸದ ವೀರನಿಷ್ಠೆಯುವರು. ಮೊದಲನೆಯವರು ಬಹುದೇವತಾ ಸಿದ್ಧಾಂತವನ್ನೊಪ್ಪಿದರೆ, ಎರಡನೆಯ ವರು ಏಕೇಶ್ವರ ಸಿದ್ಧಾಂತವನ್ನೊಪ್ಪಿದವರು. ಮಾಯಾದೇವಿಯು ಅತ್ಯಂತ ಸುಂದರ ರಾಜಪುತ್ರಿ. ಅವಳು ಜನಿಸಿದಾಗ ಸಮಾಧಿಯಲ್ಲಿದ್ದ ಋಷಿ ಮುನಿಗಳೆಲ್ಲ ವ್ಯಾವಹಾರಿಕ ಪ್ರಜ್ಞಾ ಜಗತ್ತಿಗಿಳಿದು ಬಂದು ಮಾಯಾವಿಕಾರವಶರಾಗಿದ್ದಾ ರೆಂದು ಕವಿ ಹೇಳಿದ್ದರ ಧ್ವನಿ ಎಂದರೆ ಸುಂದರ ಮಗು ಮಾಯಾದೇವಿ ಎಂದು ಸೌಂದರ್ಯ ವಿಶೇಷವು ಆ ಮಗುವಿನದೆಂದು ಅರ್ಥೈಸಬೇಕು ಕವಿಯ ವರ್ಣನೆಯನ್ನು. ಆದರೆ ಹಾಗೆ ಬಗೆಯದೆ ತಂದೆ ತಾಯಿಗಳ ಹೆಸರಿನ ಶಬ್ದಾರ್ಥ, ಮಗುವಿನ ಹೆಸರಿನ ಶಬ್ದಾರ್ಥಗಳನ್ನು ಮಾಡಿಕೊಂಡು ಅವಳು ಮಾಯೆ ಎಂದೇ ವಾಚ್ಯಾರ್ಥವನ್ನೇ ಮಾಡುವದುಂಟು. ಆದರೆ ಅದು ಅವಳ ತಂದೆ ತಾಯಿಗಳ ಧಾರ್ಮಿಕ ಜೀವನಕ್ಕೆ, ಮಾಯಾದೇವಿಯೆಂಬ ಹೆಂಗೂಸಿನ ಜನನಕ್ಕೂ ವಿರುದ್ಧವಾದಂಥ ಅರ್ಥವಾಗಿರುತ್ತದೆ. ಮಾಯೆ ಯೆಂಬುದು ಯಾವುದನ್ನು ಅಲ್ಲಮಪ್ರಭುಗಳ ಹೇಳುತ್ತಾರೆ ? ಆ ಸಿದ್ಧಾಂತದ

ಪ್ರಕಾರ ಅಂದರೆ ವೀರಶೈವರ ಮಾಯೆ ತತ್ತ್ವದ ವಿಚಾರದ ಪ್ರಕಾರ ಹೀಗೆ ಅರ್ಥೈಸುವುದು ಸರಿಯೆ ? ಎಂಬ ಪ್ರಶ್ನೆಗಳನ್ನು ನಾವು ಹಾಗೆ ಅರ್ಥೈಸಿದಲ್ಲಿ ಎದುರಿಸಬೇಕಾಗುವದಿಲ್ಲವೆ ? ಏನೇ ಇರಲಿ. ಮಾಯಾದೇವಿಯೆಂಬ 'ಕೂಸು' ಮಾಯೆಯಾಗದೆ ಮನದ ಮುಂದಣ ಆಸೆಮಾಯೆಯಲ್ಲವೆ? ಮಾಯಾದೇವಿಯು ರೂಪಾತಿಶಯವುಳ್ಳ ಶಿವಭಕ್ತೆ. ಆಕೆಯು ಜನನವಾದಾಗ ಬಂದ ಅವಳ ಕುಲಗುರು ಅಹಂಕಾರಾಚಾರ್ಯರು ಈ ಮಗುವಿಗೆ ಶಿವನೇ ಪತಿಯಾಗಬೇಕು ಎಂಬ ಉದ್ಗಾರ ತೆಗೆದುದು ಕೂಡ ಅವಳ ಭವಿಷ್ಯದ ಬದುಕಿನ ರೀತಿ; ಅವ ಳಾರಿಗಾಗಿ ತನ್ನ ಜೀವನವನ್ನು ಮುಡಿಪಾಗಿಟ್ಟಳೆಂಬುದನ್ನೇ ಸೂಚಿಸುತ್ತದೆ. ಇವಳು ಮಾಯಾದೇವಿ. ಮಾಯಾ ದೇವಿಯು ಹದಿವಯದಲ್ಲಿದ್ದಾಗ, ಅವಳ ತಂದೆತಾಯಿಗಳು ಕತ್ತುರಿರೋಡಿನಲ್ಲಿದ್ದಾಗ ಇವರ ಕುಲಗುರು ಅಹಂಕಾರಾ ಚಾರ್ಯರು ಬಂದು ಇವಳ ರೂಪಲಾವಣ್ಯಾತಿಶಯ, ಕಲಿತ ವಿದ್ಯೆ, ಇವಳ ಲ್ಲಿದ್ದ ಭಕ್ತಿಯನ್ನು ಕಂಡು ಇವಳಿಗೆ ಶಿವನಲ್ಲದೆ ಮಾನವರಾರೂ ಪತಿ ಯಾಗಲಾರರು ಎಂದು ಹೇಳಿದರು. ಅದಕ್ಕಾಗಿ ಶಿವದೀಕ್ಷೆಕೊಟ್ಟು ಶಿವನ ನ್ನೊಲಿಸುವ ಭಕ್ತಿಮಾರ್ಗದ ಗುಟ್ಟನ್ನು ತಿಳಿಸಿದರು. ಮಾಯಾದೇವಿ ತನಗೆ ಆ ನಿರಾಕಾರನಾದ ದೇವನು ಹೇಗೆ ಪತಿಯಾಗುವದು ಸಾಧ್ಯವೆಂಬ ಶಂಕೆ ಯನ್ನೆತ್ತಿದಾಗ, ಪುರುಷರೂಪುಧರಿಸಿ ಬಂದು ನಿನ್ನನ್ನು ಲಗ್ನವಾಗುವನು ಎಂದು ಗುರುಗಳು ಹೇಳಿ ಶಂಕೆ ಪರಿಹರಿಸಿದರು. ಆ ಶುದ್ಧಭಕ್ತಳು ತನ್ನನ್ನು ಶಿವನಿಗಾಗಿ ಮುಡಿಪಿಟ್ಟವಳೆ ಭಕ್ತಿಯಲ್ಲಿ ಅವಳು ಮಹಾದೇವಿಯಕ್ಕಗಾಗಲಿ. ಮೀರಾಬಾಯಿಗಾಗಲೀ ಒಂದು ಗುಲಗಂಜಿತೂಕದಷ್ಟು ಕಡಿಮೆಯಾದವಳಲ್ಲ ವೆಂದು ಹೇಳಬಹುದು. ನೈಷ್ಠಿಕ ಬ್ರಹ್ಮಚಾರಿಣಿ ಕೂಡ. ಚಾಮರಸನು ತಿಳಿಸುವಂತೆ ಮಹಾದೇವಿಯಕ್ಕನಂತೆ ಮಾಯಾದೇವಿಕೂಡ ಕಾರಣಕನ್ನೆ. ಸಗುಣವು ನಿರ್ಗುಣವಾದಾಗಲೆ ಮುಕ್ತಿಯೆಂಬ ಪಾಠ ಇಲ್ಲಿದೆ. ಸಗುಣವು ಶಾಶ್ವತವಲ್ಲವೆಂಬುದೇ ಮಾಯು ಶಬ್ದದ ಅರ್ಥವಿಲ್ಲಿ.

ರಾಜಕನ್ನೆಯಾದ ಮಾಯಾದೇವಿಗೆ ರಾಜಕನ್ನೆಯರಿಗೆ ದೊರೆಯ ಬೇಕಾಗಿದ್ದ ಶಿಕ್ಷಣವು ದೊರೆತಿತ್ತು. ಅವಳು ಮೀರಾಬಾಯಿಯಂತೆ ನೃತ್ಯ ಕಲಾಪ್ರವೀಣೆಯೂ ಆಗಿದ್ದಳು. ಭಾರತೀಯರಿಗೆ ನೃತ್ಯ ಮತ್ತು ಗಾಯನ

ಗಳೆರಡೂ ಕಲೆಗಳು ದೇವರನ್ನೊಲಿಸುವ ಪವಿತ್ರ ಸಾಧನಗಳು. ಶಿವನು ನಾದ ಪ್ರಿಯನು, ನೃತ್ಯಪ್ರಿಯನು. ಶಿವನನ್ನು ಆರಾಧಿಸುವಾಗ ಭಕ್ತಿಯಿಂದ ನೃತ್ಯವನ್ನು ದಿನನಿತ್ಯ ಮಧುಕೇಶ್ವರ ನಾಮ ಶಿವನ ಮುಂದೆ ಮಾಡಿದ ಮೇಲೆ ಪ್ರಸಾದವನ್ನು ವಿತರಣೆ ಮಾಡುತ್ತಿದ್ದಳು. ಮೀರಾಬಾಯಿ ತಾನು ಭಕ್ತಿಯಿಂದ ಗಿರಿಧರನಾಗರನ ಮುಂದೆ ಕುಣಿಯುತ್ತಿದ್ದುದನ್ನು ನಾವಿಲ್ಲಿ ಸ್ಮರಿಸಿಕೊಳ್ಳಬಹುದು. ಮಾಯಾದೇವಿಯು ಮಧುಕೇಶ್ವರನಿಗೆ ಮಾಡುತ್ತಿದ್ದ ಷೋಡಶೋಪಚಾರವನ್ನು ಅಥವ ಷೋಡಶೋಪಚಾರದ ಭಕ್ತಿಯನ್ನು ಆಚರಿಸುವದನ್ನು ಮನಂಬುಗುವ ರೀತಿಯಲ್ಲಿ ಬನ್ನಿಸುವದನ್ನು ಪ್ರಭುಲಿಂಗ ಲೀಲೆಯಲ್ಲಿ ನೋಡಬಹುದು. ಅವಳು ದಿನನಿತ್ಯ ಮಧುಕೇಶ್ವರನ ದೇವಾಲಯಕ್ಕೆ ತನ್ನ ಸೇವಿಕೆಯರೊಡನೆ, ಗೆಳತಿಯರೊಡನೆ ಶೃಂಗರಿಸಿಕೊಂಡು ತಪ್ಪದಲೆ ಪೂಜೆಮಾಡಲು ಹೋಗುತ್ತಿದ್ದುದನ್ನು ಕವಿ ತಿಳಿಸುತ್ತಾನೆ. ಮಾಯಾದೇವಿಯು ಯೌವ್ವನೆಯಾದಂತೆ ಅವಳ ಭಕ್ತಿಗೂ ಯೌವ್ವನವು ಪ್ರಾಪ್ತವಾಗುತ್ತದೆ. ನಿರಾಕಾರನಾದ ಪರಶಿವನು ತನಗೆ ಪತಿದೇವನಾಗಲು ಸಾಕಾರ ಧರಿಸಿ, ಅವನೆಂದು ಬರುವನೋ ಎಂಬ ನಿರೀಕ್ಷೆಯಲ್ಲಿರುತ್ತಾಳೆ. ಮಹಾದೇವಿಯಕ್ಕ, ಬಸವಣ್ಣ ಮೊದಲಾದ ಭಕ್ತೋತ್ತಮರು ಹೊಂದೊಡಿಗೆಯನ್ನುಟ್ಟು ಶೃಂಗರಿಸಿಕೊಂಡು ಶಿವನ ಬರುವಿಗಾಗಿ ಹಾರೈಸಿಕೊಂಡು ಇರುವಾಗ ತರಗೆಲೆಯು ಗಿರಿಕೆನ್ನಲು ಶಿವನೆ ಬಂದನೆಂದು ಹೋರಳಿ ನೋಡುವ ಕಾತರತೆಯು ಮಾಯಾದೇವಿಯಲ್ಲಿ ಕೂಡ ಸಾಕಾರಗೊಂಡಿರುತ್ತದೆ. ಅವಳು ತನ್ನನ್ನು ತಾನು ಶೃಂಗರಿಸಿಕೊಂಡು ಬಂದಂತೆ, ತನ್ನ ಜೊತೆಗಾರ್ತಿಯರೂ ಕೂಡ ಶೃಂಗರಿಸಿಕೊಂಡು ಬರುತ್ತಿದ್ದರು ಮಧುಕೇಶ್ವರನ ಗುಡಿಗೆ ಅತ್ಯಂತ ವೈಭವದಿಂದ ರಾಜವೈಭವದಿಂದ ಎಂದು ಕವಿ ವರ್ಣಿಸುತ್ತಾನೆ. ಮಧುಕೇಶ್ವರ ಲಿಂಗವನ್ನು ಪೂಜಿಸುವಾಗ, ಕೊನೆಯ ಸೇವೆಯೆಂದು ನೃತ್ಯದಲ್ಲಿ ತಲ್ಲೀನಳಾದ ಅವಳ ದೃಷ್ಟಿಯೆಲ್ಲ ಆ ಶಿವಲಿಂಗದಲ್ಲಿಯೇ ನಟ್ಟಿರುತ್ತಿತ್ತು. ಆತನೇ ಅವಳ ಸರ್ವಸ್ವದ ಕೇಂದ್ರ ಬಿಂದು. ಇದು ಅವಳ ಶಿವನ ನಿತ್ಯದ ಪೂಜೆ, ಏಕಾಗ್ರಚಿತ್ತದ ವೈಭವದ ಪೂಜೆ, ಶಿವನೆಂದು ಮಾನವಾಕಾರದಲ್ಲಿ ತನ್ನ ನೊಲಿಸಲು ಬರುವನೆಂಬ ನಿರೀಕ್ಷಣೆಯ ಪೂಜೆ.

ಈ ಪೂಜೆ, ಈ ಧ್ಯಾನ, ನಿರೀಕ್ಷಣೆಗಳು ಮಹಾಭಾರತದಲ್ಲಿಯ ಒಂದು ಘಟನೆಯನ್ನು ಸ್ಮರಣೆಗೆ ತರುತ್ತವೆ ಅರ್ಜುನನು ಕೊನೆಯ ನಿರ್ಣಯದ ಯುದ್ಧಕ್ಕಾಗಿ ಸಿದ್ಧತೆ ಮಾಡಿಕೊಳ್ಳುವಾಗ ಶ್ರೀ ಕೃಷ್ಣನು ಅವನಿಗೆ ಪಾಶುಪತ ಅಸ್ತ್ರದ ಅವಶ್ಯಕತೆಯನ್ನು ತಿಳಿಸುವುದರ ಜೊತೆಗೆ, ಅದು ಶಿವ ಪರಮಾತ್ಮನಲ್ಲಿದೆ. ಅವನನ್ನು ಅನನ್ಯ ಭಕ್ತಿಯಿಂದ ಪೂಜಿಸಿ ಪಡೆಯಬಹುದೆಂದು ಹೇಳುತ್ತಾನೆ. ಅವನ ಉಪದೇಶದಂತೆ. ಅರ್ಜುನನು ತಪಸ್ಸಿನಲ್ಲಿ ತೊಡಗಿದ್ದಾನೆ. ಅವನ ಉಗ್ರಭಕ್ತಿಗೆ ಶಿವನು ಮೆಚ್ಚಿಕೊಂಡರೂ ಆತನನ್ನು ಪರೀಕ್ಷೆ ಮಾಡುವದಕ್ಕಾಗಿ ಕಿರಾತನ ವೇಷಧರಿಸಿ ಬರುತ್ತಾನೆ. ಆತನು ತನ್ನ ವೃತ್ತಿಗನುಗುಣವಾದ ಕಾಡಹಂದಿಯನ್ನು ಬೇಟೆಯಾಡಲು ಅದನ್ನು ಬೆನ್ನಟ್ಟುವನು. ಆ ಮಾಯಾರೂಪದ ಹಂದಿ ಅರ್ಜುನನೆಡೆ ಓಡಿಬಂದುದನ್ನರಿತ ಅರ್ಜುನನು ಅದನ್ನು ಕೊಲ್ಲಲು ಬಾಣವನ್ನು ಬಿಡುವನು. ಕಿರಾತನು ತನ್ನ ಬಾಣಕ್ಕೆ ಆ ಹಂದಿಯು ಸತ್ತಿತೆಂದು ಹೇಳುವನು. ಅರ್ಜುನನು ಅದು ತನ್ನ ಬಾಣಕ್ಕೆ ಸತ್ತಿತೆಂದುವಾದ ಮಾಡುವನು. ಅವರೀರ್ವರಲ್ಲಿ ಯುದ್ಧ ನಡೆದು, ಅರ್ಜುನನು ಕಿರಾತನಿಗೆ ಸೋಲುವನು. ದುಃಖಿಯಾದ ಅರ್ಜುನನು ಮಳಲಶಿವಲಿಂಗ ಪೂಜಿಸತೊಡಗುವನು. ಆಗ ಆ ಕಿರಾತನು ಬೇರಾರೂ ಆಗದೆ ಸ್ವತಃ ಶಿವನೇ ಆಗಿರುವನೆಂದು ಗುರುತು ಹಿಡಿಯುತ್ತಾನೆ.

ಮಾಯಾದೇವಿಯ ಜೀವನದಲ್ಲಿ ಕೂಡ ಇಂಥದೊಂದು ಘಟನೆ ಜರಗುತ್ತದೆ. ಅರ್ಜುನನ ಲಕ್ಷವನ್ನು ಕಿರಾತರೂಪಿ ಶಿವನೆಡೆಗೆ ಸೆಳೆಯಲು ಕಾಡು ಹಂದಿಯು ಕಾರಣವಾದರೆ, ಮಾಯಾದೇವಿಯ ಲಕ್ಷವನ್ನು ಸಾಕಾರ ಶಿವ ರೂಪಿ ಅಲ್ಲಮಪ್ರಭುವಿನೆಡೆ ಸೆಳೆಯಲು ಮದ್ದಳೆಯ ಮನೋಹರ ನಿನದವು ಕಾರಣವಾಗುತ್ತದೆ. ಮಾಯಾದೇವಿಯು ಪ್ರತಿನಿತ್ಯದಂತೆ ಮಧುಕೇಶ್ವರ ಲಿಂಗದ ಪೂಜೆಯಲ್ಲಿ ತೊಡಗಿ, ಕೊನೆಯ ಕಾರ್ಯಕ್ರಮವಾದ ನೃತ್ಯಸೇವೆಯನ್ನು ಸಲ್ಲಿಸುತ್ತ, ಮಧುಕೇಶ್ವರಲಿಂಗದಲ್ಲಿ ದೃಷ್ಟಿಯನ್ನು ಇಟ್ಟಿರುವಾಗ, ಅಂದು ಆ ಕಾರ್ಯಕ್ರಮದಲ್ಲಿ ಮದ್ದಳೆಯನ್ನು ಬಾರಿಸುತ್ತ ಬಂದು ಪಾಲುಗೊಂಡ ಅಲ್ಲಮ ಪ್ರಭುವಿನಲ್ಲಿ ಆದು ನಿಲ್ಲತೊಡಗಿತು. ಆಗ ಮಾಯಾದೇವಿಗೆ ಈ ಮದ್ದಳೆಯ ಅಲ್ಲಮನೇ ಶಿವನೆಂದು ಭೋಧೆಯಾಗುತ್ತದೆ; ವಿಶ್ವಾಸ ದೃಢವಾಗುತ್ತದೆ.

ಶುದ್ಧ ಶಿವಭಕ್ತಿಯಲ್ಲಿದ್ದುಕೊಂಡ: ಅಂತರಂಗ ಶುದ್ಧಿಯನ್ನು ಪಡೆದ ಮಾಯಾ ದೇವಿಗೆ ಈ ಅಲ್ಲಮನೇ ತ ನ. ಕಾಯು-ತ್ತಿದ್ದ ಮಾನವಾಕಾರದ ಶಿವನೆಂಬು ದನ್ನು, ತಾನು ಕೈಹಿಡಿಯಬೇಕಾದ ಪುರುಷೋತ್ತಮನೆಂದು ದಿನಸತ್ಯದಲ್ಲಿ ಮಧುಕೇಶ್ವರನಲ್ಲಿಡುತ್ತಿದ್ದ ದಿಟ್ಟಿಯು, ತಪ್ಪದಲೆ ಅಲ್ಲಮನಲ್ಲಿಯೆ ಬಂದು ಸೇರತೊಡಗುತ್ತಿದ್ದುದರಿಂದ ಖಚಿತವಾಯಿತು. ಕಾರಣಕನ್ನೆಗ ಕಾರಣ ಪುರುಷನಾರೆಂಬ ಗುರುತುಸಿಗುವುದು ಸಹಜವಲ್ಲವೆ ? ಮಾಯಾದೇವಿಯ ಸಕಾಮ ಅಥವ ಫಲಾಪೇಕ್ಷಾ ಪೂಜೆಯ ಭಕ್ತಿಯು ಫಲಪ್ರದವಾಗು ತ್ತದೆ.

ಮಾಯಾದೇವಿ ಸಗುಣೋಪಾಸಕಳು, ಆದರೆ ಅವಳೊಲೆದ ವ್ಯಕ್ತಿ ಯಾದರೂ ನಿರ್ಗುಣಭಕ್ತಿಯನು ಬಯಸಿದವ. ಸಗುಣಭಕ್ತಿಗೆ ಫಲಭೋಗದ ಕಟ್ಟುಪಾಡಿದೆ. ಇದು ಕೂಡ ಭವಮೂಲವೆ. ಗೊಗ್ಗಯ್ಯನಿಗೆ ಪ್ರಭು ದೇವರು ಈ ಮಾತನ್ನು ತಿಳಿಸಿದ್ದು ಸ್ಮರಣಾರ್ಹ; ಚಾಮರಸನ ಕಾವ್ಯ ಮತ್ತು ಶೂನ್ಯ ಸಂಪಾದನೆಗಳೆರಡರಲ್ಲೂ ಈ ವಿಚಾರ ಉಲ್ಲೇಖವಾಗಿದೆ. ಪ್ರಭುಲಿಂಗಲೀಲೆಯಲ್ಲಿ ಅಲ್ಲಮ ಪ್ರಭುವು ತೋಟದಲ್ಲಿ ಕೆಲಸಮಾಡಿ, ಲಿಂಗ ಜಂಗಮ ದಾಸೋಹವಮಾಡಿ ಕೈಲಾಸಕ್ಕೆ ಹೋಗುವ ಗೊಗ್ಗಯ್ಯನನ್ನು ಎಚ್ಚ ರಿಸಿ ಅದು ಭವದ ಮೂಲ ಎಂದು ತಿಳಿಸಿದರೆ; ಶೂನ್ಯಸಂಪಾನೆಯಲ್ಲಿ ಗೊಗ್ಗಯ ನೀನು ಮಾಡುವ ಒಕ್ಕಲುತನದಿಂದ ನಾನು ಮಾಡುವ ಒಕ್ಕಲ ತನವು ಶ್ರೇಷ್ಠ, ಇದು ಮುಕ್ತಿಕಾರಣ, ಅವನ್ನು ನಿನಗೆ ಕಲಿಸುವೆನು: ಅದನ್ನು ನೀನು ಮಾಡು . ಎಂದು ಪ್ರಭುದೇವರು ಗೊಗ್ಗಯ್ಯನಿಗೆ ಹೇಳಿದ್ದಾರೆ. ಮತ್ತೊಂದಡೆಯಲ್ಲಿ ಸಗುಣವು ಮೂರ್ತಿಗೆ ಕಾರಣ. ಮೂರ್ತಿಯಾದುದಕ್ಕೆ ಪ್ರಳಯ ತಪ್ಪದು ಎಂದು ಹೇಳಿದ್ದು ಕೂಡ ಇದೇ ವಿಚಾರವನ್ನು ತಿಳಿಸುತ್ತದೆ. ಮಾಯಾದೇವಿ ಕೂಡ ಸಗುಣವನ್ನಾರಾಧಿಸಿ ಪ್ರಳಯಕ್ಕೊಳಗಾಗಬಾರದೆಂಬ ಉದ್ದೇಶದಿಂದ ಕೂಡಿದ ಪ್ರಭುದೇವ ಅತ್ಯಂತ ಕರುಣಾದ್ರ್ರ ಹೃದಯಿ ಯಾಗಿ, ಮಾಯಾದೇವಿಯನ್ನು ನಿರ್ಗುಣಭಕ್ತಿಯತ್ತ ತಿರುಗುವಂತೆ ಪ್ರಯತ್ನಿ ಸುತ್ತಾನೆ, ಇವರೀರ್ವರಲ್ಲಿ ಒಂದು ಬಗೆಯ ಹೋರಾಟವೇ ಕಂಡುಬರುತ್ತದೆ ಈ ಪ್ರಯತ್ನದಲ್ಲಿ.

ಇಲ್ಲಿ ಒಂದು ಮಾತು, ಬಹು ಮಹತ್ವದ ಮಾತು ಸ್ಮರಣೆಗೆ ಬರುತ್ತದೆ. ಆ ಮಾತು ರಾಮಕೃಷ್ಣ ಪರಮಹಂಸರ ಜೀವನದಲ್ಲಿ ಘಟಿಸಿರುವಂಥದು. ರಾಮಕೃಷ್ಣಪರಮಹಂಸರ ಜೀವನದ ವಿಧಾನ, ಪಡೆದ ಸಿದ್ಧಿಗಳೆಲ್ಲ ಮಾಯಾ ದೇವಿಯ ಸಾಧನೆ ಮತ್ತು ಸಿದ್ಧಿಗಳನ್ನೇ ಹೋಲುತ್ತವೆ. ಮೊದಮೊದಲು ಈ ಮಾತು ನಗೆಯನುಂಟುಮಾಡಬಹುದು, ಆದರೆ ಇಲ್ಲಿ ಮಾಡುವ ವಿಶ್ಲೇಷಣೆಯಿಂದ ಕೊನೆಗೆ ಒಪ್ಪುವಂತಾಗುತ್ತದೆ.

ರಾಮಕೃಷ್ಣಪರಮಹಂಸರು ಕಾಳಿಮಾತಾ ಪೂಜೆಯನ್ನು (ಷೋಡಶೋಪಚಾರ ಪೂಜೆಯನ್ನು) ಅತ್ಯಂತ ಭಕ್ತಿಯಿಂದ ಮಾಡುತ್ತಿದ್ದರು. ತಾಯಿ ಕಾಳಿಮಾತೆಯೊಡನೆ ರಾಮಕೃಷ್ಣಪರಮಹಂಸರು ಸಂಭಾಷಣೆ ಮಾಡುತ್ತಿದ್ದರು. ಅವರ ಭಕ್ತಿಗೆ ಮೆಚ್ಚಿದ ಕಾಳೀಮಾತಾ ರಾಮಕೃಷ್ಣಪರಮಹಂಸರಲ್ಲಿ ವಾಸವಾಗಿರುವುದು ಅಥವ ಪರಮಹಂಸರೇ ಕಾಳೀಮಾತಾ ಆಗಿರುವುದು ಕೂಡ ಕಂಡವರು ತಿಳಿಸಿದ್ದುಂಟು. ಇದು ಸಗುಣಭಕ್ತಿಯ ಫಲ. ವೀರಶೈವರು ಅಂಗ ಲಿಂಗವಾಗುತ್ತದೆ ಎಂದು ಹೇಳುವುದು ಇದೇ ವಿಚಾರ. ರಾಮಕೃಷ್ಣ ಪರಮಹಂಸರು ಸಗುಣೋಪಾಸನೆಯಿಂದ ಪಡೆದ ಈ ಸಗುಣಸಮಾಧಿಯಲ್ಲಿಯೇ ಉಳಿಯುತ್ತಿದ್ದರು. ಅವರು ಸ್ವತಃ ಈ ಸಮಾಧಿಯಿಂದ ಮುಕ್ತರಾಗಲು ಅಸಮರ್ಥರಾಗಿದ್ದರು. ಈ ತೊಂದರೆಯನ್ನು ಅರಿತ ತೋತಾಪುರಿ ಎಂಬ ಸನ್ಯಾಸಿಯು ರಾಮಕೃಷ್ಣಪರಮಹಂಸರನ್ನು ಪಾರಮಾಡಲು ಬಂದ. ಈ ಸಗುಣಸಮಾಧಿಯಿಂದ ಆತನು ತನ್ನ ನೈಪುಣ್ಯದಿಂದ ರಾಮಕೃಷ್ಣ ನಿರ್ಗುಣಸಮಾಧಿಗೆ ಹೋಗುವಂತೆ ದಾರಿಮಾಡಿಕೊಟ್ಟನು. ಆಗ ರಾಮಕೃಷ್ಣ ಪರಮ ಹಂಸರು ಸಗುಣೋಪಾಸನೆಯಿಂದ ನಿರ್ಗುಣೋಪಾಸನೆಯನ್ನು ಸಂಪಾದಿಸಿದರು. ಅವ್ಯಾಪ ಸಗುಣಬ್ರಹ್ಮದಲ್ಲಿ ಮನಲೀನಗೊಳಿಸುವುದರಿಂದ ನಿರ್ಗುಣಬ್ರಹ್ಮದಲ್ಲಿ ತಾವು ಲೀನಗೊಳ್ಳುವುದನ್ನು ಸಿದ್ಧಿಮಾಡಿಕೊಂಡರು. ಪ್ರಭುದೇವರು ಕೂಡ ಸಗುಣೋಪಾಸನೆಯಲ್ಲಿ ಸದಾನಿರತಳಾಗಿ ಸಗುಣಬ್ರಹ್ಮದಲ್ಲಿ ಮನನಿಲ್ಲಿಸುವ ಮಾಯಾದೇವಿಯಲ್ಲಿ ನಿರ್ಗುಣಬ್ರಹ್ಮನಲ್ಲಿ ತೊಡಗುವಂತೆ ಬದಲಾವಣೆಯನ್ನು ಮಾಡಲು ಪ್ರಯತ್ನಿಸಿದರು. ಆದರೆ ಮಾಯಾದೇವಿಗೆ ಸಾಕಾರಶಿವನನ್ನಲ್ಲದೆ, ನಿರಾಕಾರ ಶಿವನಲ್ಲಿ ತಾನು ತಲ್ಲೀನವಾಗುವದು ಅಸಾಧ್ಯ

ವಾಯಿತು: ಆದ್ದರಿಂದ ನಿರ್ಗುಣಸಮಾಧಿಹೊಂದಲು ಸಮರ್ಥಳಾದ, ಇಲ್ಲವೆ ನಿರ್ಗುಣಬ್ರಹ್ಮನಲ್ಲಿರಲಸಮರ್ಥಳಾದ ಮಾಯಾದೇವಿಗೆ ಪ್ರಭುದೇವರು ನಿನಗೆ ಮುಕ್ತಿಯಿಲ್ಲವೆಂದು ಹೇಳಬೇಕಾಯಿತು. ಇದು ಅನಿವಾರ್ಯವಾದ ಸತ್ಯ ಬೋಧನೆ ಸಗುಣಭಕ್ತಿಯಲ್ಲಿ ಶಿಲುಕಿದ ಮಾಯಾದೇವಿ ಆ ಸಗುಣೋಪಾಸನೆಯ ಕಾತರತೆಯಿಂದ ಸಗುಣಸಾಕ್ಷಾತ್ಕಾರಕ್ಕಾಗಿಯೇ ಅವಳು ಬದುಕಿದಳು. ತನ್ನ ಉಪಾಸನಾ ಮೂರ್ತಿಯಾದ ಅಲ್ಲಮಪ್ರಭುದೇವರು ಬಯಲುದೇಹಿಯಾಗಿ ಅವಳ ಸಾಧನೆಗೆ ಅಸಾಧ್ಯವಾದುದರಿಂದ ಸಗುಣಮೋಹದಲ್ಲಿಯೇ ಅವಳು ಲಯವಾಗಬೇಕಾಯಿತು.

ಇದು ಮಾಯಾದೇವಿಯ ಬದುಕಿನ ಆದರ್ಶ. ಮಾಯಾದೇವಿಯು ಸಗುಣೋಪಾಸನೆ, ಸಗುಣಭಕ್ತಿಯ ಸಾಕಾರಮೂರ್ತಿ. ಚಾಮರಸನು ಅತ್ಯಂತ ಮನೋಹರವಾಗಿ ಚಿತ್ರಿಸಿದ್ದಾನೆ. ಅದೇ ರೀತಿ ಆತನು ಸುಗುಣಭಕ್ತಿಯ ಇನ್ನೊಂದು ಪ್ರಗತಿಯ ಉದಾಹರಣೆ, ನಿರ್ಗುಣ ಭಕ್ತಿಯ ಪರಿಪಕ್ವತೆಯ ಫಲವಾದ ಬದುಕನ್ನು ಸೂಕ್ತ ಚಿತ್ರಿಸಿದ್ದಾನೆ. ಸಗುಣಭಕ್ತಳಿಗಾಗಿ ಆರುಗತಿಗಳನ್ನು ಮೀಸಲಿಟ್ಟ ಚಾಮರಸನು ನಿರ್ಗುಣ ಭಕ್ತಿಯ ಬದುಕಿಗಾಗಿ ಇಷ್ಟು ಸ್ಥಳಾವಕಾಶವನ್ನು ಮೀಸಲಾಗಿಟ್ಟಿಲ್ಲ. ಸಗುಣಭಕ್ತಿಯ ವಿವಿಧ ಮುಖಗಳನ್ನು ಪ್ರಭುಲಿಂಗ ಲೀಲೆಯಲ್ಲಿ ನೋಡಬಹುದು. ಮಾಯಾದೇವಿಯು ಅನುಭವಿಸಿದ ವಿರಹವನ್ನು ಮೀರಾಬಾಯಿಯ ಒಂದು ಭಾವನೆಯು ಹೃದಯಂಗಮವಾಗಿ ಚಿತ್ರಿಸುತ್ತದೆ. : ಮೀರಾಬಾಯಿಯು ತನ್ನ ಪ್ರಿಯ ಪ್ರಿಯತಮ ಗಿರಿಧರಗೋಪಾಲನು ತಾನು ಜೀವಂತವಿರುವಾಗ ದರ್ಶನವನ್ನು ಕೊಡದಿದ್ದರೂ ಪರವಾ ಇಲ್ಲ, ಆದರೆ ತಾನು ಸತ್ತಮೇಲೆ ಪಾರ್ಥಿವ ಶರೀರದ ಬೂದಿಯನ್ನಾದರೂ ತನ್ನದೇಹಕ್ಕೆ ಸವರಿಕೊಂಡರೆ ಸಾಕು. ಆಗ ತನ್ನ ವಿರಹಾಗ್ನಿಯು ಶಮನವಾಗಿ ತಾನು ಪುನೀತಳಾಗುವಳೆನ್ನುವಳು. ಇದು ಸುಗುಣಭಕ್ತಿಯ ತೀವ್ರವಿರಹದ ಉತ್ತಮೋತ್ತಮ ಉದಾಹರಣೆ. ಬೆಳಗಾಂವಿ ಮಾಯಾದೇವಿಯಲ್ಲಿ ಇಂಥ ವಿರಹವನ್ನು ದೈವೀವಿರಹವನ್ನು ಕಾಣುತ್ತೇವೆ.

ಮಾಯಾದೇವಿಯ ಮೂರ್ತಿಯನ್ನು ಮಾಡಿ ಜನ ಪೂಜಿಸಿದ್ದಾರೆ

ಅವಳ ಮೂರ್ತಿಯನ್ನು ಬನವಾಸಿಯ ನೆರೆಹೊರೆಯಲ್ಲಿ ಕಾಣುತ್ತೇವೆ. ಪ್ರೊ. ಎಸ್. ಎಸ್, ಬಸವನಾಳರು ಈ ಮೂರ್ತಿಯ ಫೋಟೊ ಕೊಟ್ಟಿದ್ದನ್ನು ಅವರು ಸಂಪಾದಿಸಿದ ಪ್ರಭುಲಿಂಗಲೀಲೆಯಲ್ಲಿ ನೋಡಬಹುದು, ಇನ್ನೊಂದು ಕಡೆಗೆ ಮಾಯಾದೇವಿಯು ಪ್ರಭುದೇವರೊಡನೆ ಪೂಜೆಗೊಳ್ಳುತ್ತಿರುವುದನ್ನು ನೋಡುತ್ತೇವೆ. ಇದು ಕುತೂಹಲಕಾರಕ ಉದಾಹರಣೆ. ಬೆಳಗಾಂವಿ ಜಿಲ್ಲೆಯ ಚಿಕ್ಕೋಡಿತಾಲೂಕಿನಲ್ಲಿ, ಸಮೀಪದಲ್ಲಿ ಚಿಂಚಣಿ ಎಂಬ ಒಂದು ಸಣ್ಣಹಳ್ಳಿ ಇದೆ, ಬೆಳಗಾಂವಿ ಜಿಲ್ಲೆಯಲ್ಲಿ ಇನ್ನೊಂದು ಚಿಂಚಣಿಯಿದೆ. ಇದು ನಮ್ಮ ವಿಷಯಕ್ಕೆ ಸಂಬಂಧಿಸಿದುದಲ್ಲ. ಅಲ್ಲಿ ಒಂದು ಮಾಯಾದೇವಿಯ ಪ್ರಸಿದ್ಧ ದೇವಸ್ಥಾನವಿದೆ. ಮಾಯಾದೇವಿಯ ಚಿಂಚಣಿಯಲ್ಲಿ ಒಂದು ವಿರಕ್ತ ಮಠವಿರುತ್ತದೆ. ಅದರ ಹೆಸರು ಪ್ರಭುದೇವರಮಠ. ಆ ಮಠದಲ್ಲಿ ಮೊದಲು ಮಾಯಾದೇವಿಯ ಪೂಜೆ, ಆನಂತರ ಪ್ರಭುದೇವರ ಪೂಜೆ. ಈ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ ಅಗತ್ಯವಿದೆ, ಪಭುದೇವರು ಮಧು ಕೇಶ್ವರಗುಡಿಯನ್ನು, ಅರಮನೆಯನ್ನು, ಕೊನೆಗೆ ಬನವಾಶಿಯನ್ನು ತ್ಯಜಿಸಿ, ಅನಿಮಿಷದೇವರಿಂದ ಜ್ಞಾನಲಿಂಗ ದೀಕ್ಷೆಯನ್ನು ಪಡೆದು ನಿರವಯ ಬ್ರಹ್ಮ ಬೋಧೆ ಪ್ರಚಾರಕ್ಕಾಗಿ ಚರಜಂಗಮವಾಗಿ ಸಂಚಾರವಲ್ಲಿ ಈನಾಡಿಗೆ ಬಂದರೆ ? ಮಾಯಾದೇವಿ ಅವರ ಬೆನ್ನು ಹತ್ತಿಬಂದು ಇಲ್ಲಿ ಸಮಾಧಿ ಹೊಂದಿದಳೆ ? ಅಥವಾ ಮಾಯಾದೇವಿಯು ಪ್ರಭುದೇವರಿದ್ದಲ್ಲಿ ಇರುವ ಳೆಂಬ ನಂಬುಗೆಯನ್ನು ಇದು ಸೂಚಿಸುತ್ತಿದೆಯೆ? ಸಗುಣ ನಿರ್ಗುಣಗಳೆರಡೂ ಒಂದರಿಂದೊಂದಗಲಿ ಅಥವಾ ಅವುಗಳನ್ನು ಬೇರ್ಪಡಿಸಿ ಇರುವುದು ಸಾಧ್ಯ ವಿಲ್ಲವೆಂಬುದನ್ನಿದು ಸೂಚಿಸುತ್ತದೆಯೆ ? ಇಂಥ ಪೂಜೆಯು ಬೇರೆಡೆಯಲ್ಲಿ ಎಲ್ಲಿಯಾದರೂ ನಡೆಯುತ್ತದೆಯೆ ಅಥವಾ ಇಲ್ಲವೆ ? ಈ ರೂಢಿ ಇಲ್ಲಿಯ ಹೊರತು ಬೇರೆಡೆ ಇಲ್ಲದಿದ್ದ ಪಕ್ಷದಲ್ಲಿ ಇದರ ವೈಶಿಷ್ಟ್ಯವಾದರೂ ಏನು ? ಹೀಗೆ ಹಲವಾರು ಸಮಸ್ಯೆಗಳೇಳುತ್ತವೆ. ವಿದ್ವಾಂಸರು ಈ ಸಮಸ್ಯೆಗಳಿಗೆ ಉತ್ತರ ಹುಡುಕಬೇಕಾಗಬಹುದಲ್ಲವೆ ?

ಮಹಾದೇವಿಯಕ್ಕ :

ಮಹಾದೇವಿಯಕ್ಕ ಕೂಡ ಈ ಸುಂದರ ಬನವಾಸಿಯ ನಾಡಿನಲ್ಲಿಯೇ

ಜನಿಸಿದವಳು. ಬನವಾಸಿಯು ಅತ್ಯಂತ ಮನೋಹರನಾಡಾಗಿತ್ತೆಂಬುವದಕ್ಕೆ ಮಹಾಕವಿ ಪಂಪನು. 'ಆರಂಕುಶ ಮಿಟ್ಟೊಡೆ ನೆನೆವುದೆನ್ನ ಮನಂ ಬನವಾಸಿಯ ದೇಶಮಂ' ಎಂದು ಹೇಳಿದ್ದು ಒಂದು ಉತ್ತಮ ಪ್ರಮಾಣ. ಈ ಸುಂದರ ನಾಡು ಉತ್ತಮ ಶಿಕ್ಷಣದ ಕೇಂದ್ರವೂ ಆಗಿತ್ತು; ಋಷಿ ಮುನಿಗಳ ಬೀಡೂ ಆಗಿತ್ತು. ಬನವಾಸಿಯ ಹತ್ತಿರದ ಉಡುತಡಿಯಲ್ಲಿ ಮಹಾದೇವಿಯಕ್ಕ ಜನಿಸಿದವಳು. ಮಹಾದೇವಿಯಕ್ಕ ಮಾಯಾದೇವಿಯ ವಿರಹದ ಕಥೆಯನ್ನು ಕೇಳಿರಬಹುದು. ಸಗುಣೋಪಾಸಕಳಾದ ಮಾಯಾದೇವಿಯ ಆರಾಧ್ಯದೇವತೆ ಯಾದ ಮಧುಕೇಶ್ವರನ ಗುಡಿ ಬನವಾಸಿಯಲ್ಲಿದೆ. ಮಧುಕೇಶ್ವರನನ್ನು ಷೋಡಶೋಪಚಾರದಿಂದ ಪೂಜಿಸಿ ನಲಿದಾಡಿ ನರ್ತಿಸಿದ ಕಿಂಕಿಣಿಯ ಗುಂಜಾರವವನ್ನು ಆ ಗುಡಿಗೆ ಮಧುಕೇಶ್ವರನ ದರ್ಶನಕ್ಕೆ ಮಹಾದೇವಿಯಕ್ಕ ಹೋಗಿದ್ದರೆ, ಕೇಳಿರಬಹುದು. ಮಾಯಾದೇವಿಯ ಸಗುಣೋಪಾಸನೆಗೆ ಸರಿದೊರೆಯಾದ ನಿರ್ಗುಣೋಪಾಸನೆಯು ಮಹಾದೇವಿಯಕ್ಕಗಳದು. ಮಹಾದೇವಿಯಕ್ಕ ನಿರ್ಗುಣೋಪಾಸನೆಯ ಸಾಮ್ರಾಜ್ಞಿಯಾಗಿದ್ದಳೆಂದರೆ, ಅವಳಿಗೆ ಸಗುಣೋಪಾಸನೆ ಗೊತ್ತಿರಲಿಲ್ಲವೆಂದೇನಲ್ಲ. ಸಗುಣ ನಿರ್ಗುಣೋ ಪಾಸನೆಗಳೆರಡನ್ನೂ ಅವಳು ಇಷ್ಟಲಿಂಗ ಮತ್ತು ಪ್ರಾಣಲಿಂಗ ಪೂಜೆಗಳಲ್ಲಿ ಬಳಸಿಕೊಳ್ಳುತ್ತಿದ್ದಳು. ಸಗುಣೋಪಾಸನೆಯ ಪರಿಪಕ್ವ ಫಲ ನಿರ್ಗುಣೋ ಪಾಸನೆ. ಸಹಜ ಕ್ರಮವೆಂದರೆ ಮೊದಲು ಸಗುಣೋಪಾಸನೆ, ನಂತರ ನಿರ್ಗುಣೋಪಾಸನೆ. ಈ ಸಹಜಕ್ರಮವೇ ಜನಿಸಿತ್ತೆಂಬಂತೆ ಮೊದಲು ಮಾಯಾದೇವಿ ಸಗುಣೋಪಾಸನೆಯ, ಸಗುಣ ಭಕ್ತಿಯ ಧುರೀಣೆಯಾಗಿ ಜನಿಸಿಹೋದನಂತರ, ನಿರ್ಗುಣೋಪಾಸನೆಯ ಮತ್ತು ನಿರ್ಗುಣ ಭಕ್ತಿಯ ಪರಾವತಾರಿಯಾದ ಮಹಾದೇವಿಯಕ್ಕನ ಜನನ. ಅವೆರಡರ ಸೊಬಗಿನ ಬೀಡು ಬನವಾಸಿಯ ನಾಡಾಯಿತು ಮಾಯಾದೇವಿ ಮತ್ತು ಮಹಾದೇವಿಯಕ್ಕ ನೆರೆಹೊರೆಯ ಊರುಗಳಲ್ಲಿ ಜನಿಸಿದ್ದರಿಂದ.

ಮಹಾದೇವಿಯಕ್ಕನ ತಂದೆ-ತಾಯಿಗಳು ವೀರಶೈವಾಗಮಾಚಾರ ಶಿರೋ ಮಣಿಗಳು. ಚಾಮರಸ ತಿಳಿಸಿದಂತೆ ತಂದೆಯು ವೀರಶಿವಾಗಮಾಚಾರ್ಯ; ಶಿವಾಗಮ ಜ್ಞಾನವನ್ನು ತಂದೆಯಲ್ಲಿಯೇ ಕಲಿತವಳು. ಶಿವಭಕ್ತಿ ಶಿವಜ್ಞಾನ

ಗಳ ಪ್ರಸಾದವನುಂಡು ಬೆಳೆದವಳು; ಮಾಯಾದೇವಿ ಮತ್ತು ಮೀರಾಬಾಯಿ ಯಂತೆ ರಾಜಕುಮಾರಿಯಾಗಿರಲಿಲ್ಲ. ಆದರೆ ಅವಳು ಶಿವಯೋಗಿರಾಜ ಕುವರಿ. ಮಾಯಾದೇವಿ ಮತ್ತು ಮೀರಾಬಾಯಿಗಳಂತೆ ಮಹಾದೇವಿಯಕ್ಕನೂ ದೇವರೇ ತನ್ನ ಪತಿಯಾಗಬೇಕೆಂದು ಬಯಸಿದವಳು. ವಿಶ್ವರೂಪಿಯಾದ ಶಿವ ಮಹಾದೇವಿಯಕ್ಕನ ಹಸ್ತಕ್ಕೆ ಚುಳುಕಾಗಿ ಬಂದುದನ್ನರಿತ ಇಷ್ಟಲಿಂಗೋಪಾಸಕಳು. ಇವರೆಲ್ಲರು ದೇವರೆ ಪತಿಯಾಗಬೇಕೆಂದು ಬಯಸಿದವರಾದರೂ, ಇವರ ಈ ಬಯಕೆಯ ಭಕ್ತಿಯಲ್ಲಿ ಸೂಕ್ಷ್ಮ ಪ್ರಭೇದಗಳನ್ನು ಕಾಣದಿರಲಾರೆವು ಸ್ಥೂಲವಾಗಿ ಹೇಳಬೇಕೆಂದರೆ ಈ ಪ್ರಭೇದವು ಸಾಕಾರ ಮತ್ತು ನಿರಾಕಾರಗಳ ಪ್ರಭೇದ: ಮೂರ್ತ ಹಾಗೂ ಅಮೂರ್ತ ವಿಷಯಗಳ ಪ್ರಭೇದ. ಮಾಯಾದೇವಿಯ ಬಾಲ್ಯದಂತೆ, ಮಹಾದೇವಿಯಕ್ಕನ ಬಾಲ್ಯವೂ ಉಪಾಸನೆಯಿಂದ ಉಪಾಸನಾರತಿಯಿಂದ ಕೂಡಿ ಬೆಳೆದುದು. ಮಾಯಾದೇವಿಗೆ ಸಗುಣಬ್ರಹ್ಮಕ್ಕೆ ಪ್ರಿಯವಾದ ಗಾಯನ ನೃತ್ಯಾದಿಗಳಲ್ಲಿ, ಶೃಂಗಾರಗಳಲ್ಲಿ ಆಸಕ್ತಿ ಅವುಗಳನ್ನವಳು ಮಧುಕೇಶ್ವರನನ್ನು ಒಲಿಸಿಕೊಳ್ಳಲು ಬಳಸಿಕೊಂಡಳು. ಇಷ್ಟಲಿಂಗೋಪಾಸಕಳಾದ ಮಹಾದೇವಿಯಕ್ಕ ಆಚರಿಸಿದ್ದೂ ಸಗುಣಭಕ್ತಿಯೆ. ಆ ಲಿಂಗದೇವನಲ್ಲಿ ಮನನರ್ತಿಸಿತಲ್ಲದೆ, ದೇಹ ನರ್ತಿಸಲವಾಕಶ ಅಲ್ಲಿರಲಿಲ್ಲ. ಆದ್ದರಿಂದ ಶಿವನ ಸೇವೆಗಾಗಿ ನೃತ್ಯಕಲೆಯನ್ನು ಮಹಾದೇವಿಯಕ್ಕ ಕಲಿಯಬೇಕಾಗಿರಲಿಲ್ಲ. ಮಾಯಾದೇವಿ ಮಾನವರೂಪಿ ಶಿವನನ್ನು ಪತಿಯಾಗ ಬಯಸಿ ಭಕ್ತಿಯಲ್ಲಿ ತೊಡಗಿದ್ದಳು. ಮಹಾದೇವಿಯಾದರೊ 'ಗಂಡಗಂಡರನೆಲ್ಲ ಹೆಂಡಿಹೆಂಡಿರಾಗಿ ಆಳುವ ಗರುವನ', ಒಡಲಿಲ್ಲದ ನಡಿಯಿಲ್ಲದ ಕಡೆಯಿಲ್ಲವ ನಲ್ಲ'ನಿಗೊಲಿದವಳು—ಅಂದರೆ ಅಮೂರ್ತ ಅಥವ ನಿರ್ಗುಣ ಸುಂದರನಿಗೊಲಿದವಳು. ಮಾಯಾದೇವಿಯದು ಸಾಕಾರ ರತಿ; ಮಹಾದೇವಿಯಕ್ಕನದು ಸಾಕಾರ ವಿರತಿ. ನಿರಾಕಾರಪ್ರೇಮಿಯ ವಿರತಿಯ ರತಿ ತೀವ್ರತೆ ವಚನಗಳಲ್ಲಿ ಸ್ಫುಟವಾಗಿ ವ್ಯಕ್ತವಾಗುತ್ತದೆ. ರಾಜಕುಮಾರಿ ಮೀರಾಬಾಯಿಯನ್ನು ಲಗ್ನಮಾಡಿಕೊಟ್ಟರು. ಅವಳಿಗೆ ಅದರಲ್ಲಿ ಆಸಕ್ತಿಯಿರಲಿಲ್ಲ. ಗಂಡನ ಮನೆಗೆ ಹೋಗುವಾಗ ತನ್ನ ಜೊತೆ ತನ್ನ ಮನದಾಣ್ಮ ಗಿರಿಧರನಾಗರನ ಮೂರ್ತಿಯನ್ನೂ ತೆಗೆದುಕೊಂಡು ಹೋದಳು. ಪತಿದೇವರಿಂದ, ಮಾವನಿಂದ (ಪತಿಯ ತಂದೆಯಿಂದ)

ಯಾವದೇ ವಿರೋಧ ಮೀರಾಬಾಯಿಗೆ ಬರಲಿಲ್ಲ. ತೊಂದರೆ ಕೊಟ್ಟವರು ಇನ್ನುಳಿದವರು ಆದರೆ ಮಹಾದೇವಿಯಕ್ಕಳದು ಹಾಗಾಗಿಲ್ಲ. ಮಹಾದೇವಿಯಕ್ಕನ, ಅವಳ ತಂದೆತಾಯಿಗಳ ಮನಸ್ಸಿನ ವಿರುದ್ಧವಾಗಿ ಲಗ್ನಕ್ಕೆ ಒಪ್ಪಿಕೊಳ್ಳಬೇಕಾಗಿ ಬಂತು. ಊರ ದೊರೆ ಕೌಶಿಕ (ಅಥವ ಡಾ. ಎಂ. ಚಿದಾನಂದಮೂರ್ತಿಯವರು ಹೇಳುವ ಕಸಪಯ್ಯ) ಅವಳನ್ನು ಲಗ್ನಮಾಡಿ ಕೊಡುವಂತೆ ಬಲಾತ್ಕಾರ ಮಾಡಿದ ಎಂದು ಚಾಮರಸನು ತಿಳಿಸುತ್ತಾನೆ. ಲಗ್ನವಾದಮೇಲೆ ಮಹಾದೇವಿಯಕ್ಕ ಅರಮನೆಗೆ ಹೋದಮೇಲೆ ತನ್ನ ಧಾರ್ಮಿಕ ಆಚರಣೆಗೆ ಭಂಗಬಂದಾಗ ಅರಮನೆಯನ್ನು ತೊರೆದು ವೀರ ವಿರಾಗಿಣಿಯಾಗಿ ಲಿಂಗಾದಾಣತಿಯಂತೆ ಶರಣರ ಸಂಗಬಯಸಿ, ಶಿವನ ಸಾಕ್ಷಾತ್ಕಾರ ಬಯಸಿ ಸಂಚಾರ ಕೈಕೊಳ್ಳುತ್ತಾಳೆ.

ಮಹಾದೇವಿಯಕ್ಕ ನಿರ್ಗುಣಭಕ್ತಿ ಪ್ರಿಯಳಾಗಿ, ನಿರ್ಗುಣಬ್ರಹ್ಮ ರತಿಯುಳ್ಳವಳಾಗಿ ಕೌಶಕನನ್ನು ತೊರೆದಳು. ಮಾಯಾದೇವಿ ಸಗುಣೋಪಾಸಕಳಾಗಿ, ನಿರ್ಗುಣೋಪಾಸನೆಯು ಅವಳಿಂದ ಅಸಾಧ್ಯವಾದುದಾಗಿದ್ದ ಕಾರಣ ಅಲ್ಲಮಪ್ರಭುದೇವನು ಮಾಯಾದೇವಿಯನ್ನು ತೊರೆದನು. ಮಹಾದೇವಿಯಕ್ಕ ಮತ್ತು ಮಾಯಾದೇವಿಗಳಿಬ್ಬರೂ ವಿರಹಣಿಯರೆ ಎಂಬುದು ಕೂಡ ಒಪ್ಪಲೇಬೇಕಾದುದು.

ಮಹಾದೇವಿಯಕ್ಕನ ಸೌಂದರ್ಯೋಪಾಸನೆ, ಮಾಯಾದೇವಿಯ ಸೌಂದರ್ಯೋಪಾಸನೆಗಳು ಭಿನ್ನ ಭಿನ್ನ. ಮಾಯಾದೇವಿಯದು ಮೂರ್ತ ಸೌಂದರ್ಯ ಉಪಾಸನೆ. ಮಹಾದೇವಿಯಕ್ಕನದು ಅಮೂರ್ತ ಸೌಂದರ್ಯೋಪಾಸನೆ. ಮೂರ್ತ ಸೌಂದರ್ಯವು ಅಮೂರ್ತ ಸೌಂದರ್ಯದ ವ್ಯಕ್ತರೂಪವಾದರೂ, ಅವುಗಳ ಸಮಾಧಿಸಿದ್ಧಿಯ ಸಿದ್ಧತೆಗಳು ಭಿನ್ನ ಭಿನ್ನವೇ. ಮೂರ್ತಸೌಂದರ್ಯ ಷಡೇಂದ್ರಿಗಳ ವಿಷಯ. ಅಮೂರ್ತ ಸೌಂದರ್ಯವು ಇವುಗಳ ವಿಷಯವಲ್ಲ. ಮಾಯಾದೇವಿಯು ಕಂಡ ಮೂರ್ತ ಸೌಂದರ್ಯವು, ಮಹಾದೇವಿಯಕ್ಕಗಳು ಈ ಮೂರ್ತದ ಅವ್ಯಕ್ತರೂಪದ ಅಮೂರ್ತ ಸೌಂದರ್ಯದ ಕಾಣ್ಕೆಯ ವರ್ಣನೆಯಿಂದ ಒಂದರಿಂದೊಂದು ಭಿನ್ನವೆಂಬುದನ್ನೂ ಅರಿತು

ಕೊಳ್ಳಬಹುದು. ಮಹಾದೇವಿಯು ಪ್ರಿಯತಮನ ರೂಹಿನ ಸೌಂದರ್ಯವನ್ನು ಅವಳ ಬಾಯಿಂದ ಹೇಳಬೇಕು.

" ಹೊಳೆವ ಕೆಂಜೆಡೆಗಳ ಮಣಿಮುಕುಟದ
ಒಪ್ಪುವ ಸುಲಿಪಲ್ಲ ನಗೆಮೊಗದ
ಕಂಗಳ ಕಾಂತಿಯಿಂ ಈರೇಳು ಭುವನಮಂ ಬೆಳಗುವ
ದಿವ್ಯಸ್ವರೂಪನಂ ಕಂಡೆ ನಾನು !
ಕಂಡೆನ್ನ ಕಂಗಳ ಬರ ಹಿಂಗಿತ್ತಿಂದು...ಚೆನ್ನಮಲ್ಲಿಕಾರ್ಜುನನ
ನಿಲವಕಂಡು ಬದುಕಿದೆನು."

ಮಹಾದೇವಿಯಕ್ಕಗೆ ಕಂಡ ಚೆಲುವಿನರಾಸಿ ಚೆನ್ನಮಲ್ಲಿಕಾರ್ಜುನನಲ್ಲಿ ಶಾಂತಿ ದಾಂತಿಗಳು ದೊರೆತವು. ಅವನು ಮಹಾದೇವಿಯಕ್ಕನೆಲ್ಲೆಲ್ಲಿರುವಳೊ ಅಲ್ಲಲ್ಲಿ ರುವನು. ತನ್ನಿಂದ ಅವನನ್ನು ಅರಿಯುವದನ್ನು ಮಾಯಾದೇವಿ ಕಲಿತರೆ, ಅವನಿಂದ ಅವನನ್ನರಿವುದನ್ನು ಮಹಾದೇವಿಯಕ್ಕ ಕಲಿತವಳು. ಇದು ಸೌಂದರ್ಯಸಿದ್ಧಿಯ ಸಾಧನಭೇದ, ಅದು ಸೌಂದರ್ಯಸ್ವರೂಪ ಭೇದವೂ ಅಹುದು. ಮಹಾದೇವಿಯಕ್ಕ ಆ ದಿವ್ಯಸೌಂದರ್ಯದೊಡನೆ ತನ್ನನ್ನು ತಾನು ಏಕೀಕರಿಸಿಕೊಂಡಿದ್ದಳು. ಮಾಯಾದೇವಿ ಅಲ್ಲಮಪ್ರಭುವಿನಿಂದ ಭಿನ್ನಳೆಂದು ನಂಬಿದ್ದಳು. ಅವನು ತನ್ನಿಂದ ಹೊರಗೆ, ಹೊರಹೊರಗೆ. ಆದ್ದರಿಂದ ಸುಂದರಮೂರ್ತಿಯಾದ ಅಲ್ಲಮಪ್ರಭು ಹೊರಗೆ ಉಳಿದ. ಅವಳಿಗೆ ಅವನನ್ನು ತನ್ನವನನ್ನಾಗಿ, ತಾನಾಗಿ ಮಾಡಿಕೊಳ್ಳುವದು ಅಸಾಧ್ಯವಾಯಿತು. ಮಾಯಾದೇವಿ ಸಗುಣದಲ್ಲಿಯೇ ಉಳಿದಳು. ಆದ್ದರಿಂದ ಅವಳಿಗೆ ತತ್ತ್ವಜ್ಞಾನ ಅಸಾಧ್ಯವಾಯಿತು; ಮುಕ್ತಿದೊರೆಯದ ಸತಿ ಅವಳಾದಳು.

———

# ಮಧುವಿದ್ಯಾ ಮಹಾದೇವಿಯಕ್ಕ

**ಪ್ರವೇಶ :**

ಸಪರ್ಯಗಾಚ್ಛು ಕ್ರಮ ಕಾಯಮವ್ರಣಮಸ್ನಾವಿರಂ ಒದ್ದಮಪಾಪವಿದ್ಧಮ್।
ಕವಿರ್ಮನೀಷಿಃ ಪರಿಭೂಸ್ಸ್ವಯಂ ಭೂಯರ್ಾಥಾತಥ್ಯ ತೋsರ್ಥಾನ್
ವ್ಯದಧಾಚ್ಛಾಶ್ವತೀಭ್ಯಃ ಸಮಾಭಃ1

ಕರ್ಮ ಹಾಗೂ ಜ್ಞಾನಗಳ ಸಮುಸ್ವಯವನ್ನು ಗೈದು ಸುಪ್ರಸಿದ್ಧವಾದ ಕಿರಿಯಗಾತ್ರದ್ದಿದ್ದುದು ಈ ಈಶಾವಾಸ್ಯೋಪನಿಷತ್. ಇದು ಅತಿ ಮಹತ್ವದ ಕೆಲವೇ ಉಪನಿಷತ್ತುಗಳಲ್ಲಿ ಒಂದು. ಅನುಭಾವಿಯ ವೈಯ್ಯಕ್ತಿಕ(persenal) ಹಾಗೂ ಸಾಮಾಜಿಕ(soclia) ಅನುಭಾವಗಳೆರಡಕ್ಕೂ ಮೇಲಿನ ಮಂತ್ರವು ಆಧ್ಯಾತ್ಮಿಕ ಬುನಾದಿ (Metaphysicalbasis) ಇದ್ದುದು ಸ್ಪಷ್ಟವಿದೆ. ಇಲ್ಲಿ ಬರುವ 'ಕವಿ' ಎಂಬ ಪದವು ಬ್ರಹ್ಮಜ್ಞನಾದ ಬ್ರಹ್ಮಜ್ಞವಾದಿ. ಬ್ರಹ್ಮವನರಿತವನೇ ಬ್ರಹ್ಮನು: ಅಹಂಬ್ರಹ್ಮಾಸ್ಮಿ. 'ಕವಿ' ಪದದ ವಿವರಣೆಯನ್ನು ಕೊಡುತ್ತ ಶ್ರೀ ಅರವಿಂದರ.

"..The former which by direct vision and illumi nation sees reality, the priniples and forms in their true relations," ಹೇಳಿದರು. ಉಪನಿಷತ್ತು ಇನ್ನೂ ಹೇಳುವದೇನಂದರೆ ಕವಿ ತನ್ನ ಮೇಲೆ ಪ್ರಭುತ್ವ ಸಾಧಿಸಿಕೊಂಡು ಪ್ರಭುವಾಗಿ. ವಿಶ್ವ ಪ್ರಭುತ್ವ ವಿಭೂತಿಯ ಸಂಬಂಧವನ್ನು ಪಡೆದು ಸತ್ಯದ ಸೌಂದರ್ಯಾನಂದಗಳಾಗಿ ಅವುಗಳನ್ನೇ ಅಭಿವ್ಯಕ್ತಗೊಳಿಸುವ ಸ್ವಯಂಭೂ, ನಿರಂತರ ಸತ್ಯ. ಜನ ಲೋಕದ ಮನದ ಕಾಳಿಕೆಯು ಕಳೆವ ಭೇಷಜನೆಂಬುದು ಈ ಮಾತುಗಳಲ್ಲಿ ಸ್ಪಷ್ಟವಾಗಿದೆ. ಈ ಕವಿಗೂ ಮನುಕವಿಗೂ ಇರುವ ಅಂತರವೇ ಇದು. ಅನುಭಾವಿಯು ದೃಷ್ಟಾರನು-ಮನದೆರೆದು ಮಾತನಾಡಿದರೆ ಲಿಂಗವು ಕಾಣುವುದು. ಯಾಕೆಂದರೆ ಅವನ ನುಡಿಯಲ್ಲಿ ಲಿಂಗವು ರಾಸಿಯಾಗಿಪ್ಪುದು ಎಂದು ಮಹಾನುಭಾವಿ ಬಸವಣ್ಣನವರು ಕೂಡಾ ಲಕ್ಷಣಿಸಿದ್ದಾರೆ. ಇದು 'ಮನಸ್ಥಲ'ದಿಂದು ಪರಿಯಾದ 'ಘನಸ್ಥಲ.'

ಶರಣರು ಬಳಸಿರುವ 'ಅನು' ಎಂಬ ಶಬ್ದದ ಅರ್ಥಕ್ಕನುಸರಿಸಿ 'ಅನುಭಾವ' ಹಾಗೂ 'ಅನುಭವ' ಶಬ್ದಗಳನ್ನು ಹೀಗೆ ನಿರ್ವಚಿಸಬಹುದು : ಶರಣರ ಬಳಕೆಯ ಪ್ರಕಾರ 'ಅನು' ಎಂದರೆ 'ಸ್ಥಲ' ಇಲ್ಲವೆ ಪರಬ್ರಹ್ಮ. ಆದುದರಿಂದ 'ಅನು' ಎಂಬ ಪದಕ್ಕೆ 'ಭವ' ಅಥವಾ 'ಭಾವ' ಎಂಬ ಸಮುಚ್ಚಯವು ಸೇರಿಕೊಳ್ಳುವದರಿಂದ 'ಅನುಭವ' †ಮತ್ತು 'ಅನುಭಾವ' ಎಂದಾಗುತ್ತದೆ. 'ಭವ' ಎಂಬುದು ಆಗು, ಉಂಟಾಗು, ಇರು, ಮುಂತಾದ ಅರ್ಥ ಕೊಡುವದರಿಂದ 'ಅನುಭವ' ಎಂದಾಗ 'ಬ್ರಹ್ಮವಾದ' ಇಲ್ಲವೆ 'ಸ್ವಯಂಭು' ಎಂದಾಗುವುದು. 'ಭಾವ' ಎಂದರೆ ಜ್ಞಾನವೆಂಬುದೂ ಒಂದು ಅರ್ಥವಿರುತ್ತದೆ. ಆದುದರಿಂದ 'ಅನು' ಎಂಬುದಕ್ಕೆ 'ಭಾವ' ಪದವು ಸೇರಿ ಕೊಂಡು 'ಅನುಭಾವ' ವೆಂಬ ಪದವಾದಾಗ 'ಬ್ರಹ್ಮಜ್ಞಾನ' ವೆಂದರ್ಥವಾಗು ವುದು. 'ಅನುಭಾವ' ವೆಂಬ ಪದದಿಂದ 'ಅನುಭಾವಿ' ಎಂದೂ ಆಗುವದು 'ಜ್ಞಾನ'ವೆಂಬ ಪದದಿಂದ 'ಜ್ಞಾನಿ' ಎಂದಾಗುವಂತೆ. ಆಗ 'ಬ್ರಹ್ಮಜ್ಞಾನಿ' ಎಂಬ ಅರ್ಥವನ್ನು 'ಅನುಭಾವಿ' ಎಂಬ ಪದವು ಕೊಡುವುದು. 'ಅನುಭವ' ಹಾಗವ 'ಅನುಭಾವ' ಎಂಬ ಎರಡು ಪದಗಳ ಮೇಲಿನ ವಿವರಣೆಯಿಂದ ಎರಡು ಸಂಗತಿಗಳು ಸ್ಫುಟವಾಗಿ ತಿಳಿಯುತ್ತವೆ. ಒಂದು–'ಅನುಭವ' ಎಂಬುದರಲ್ಲಿ 'ಅನು'ವು 'ಭವ' ಸಾಮರ್ಥ್ಯವುಳ್ಳದೆಂದಾಗುವುದರಿಂದ 'ಅನುವು' 'ಶಕ್ತಿ ವಿಶಿಷ್ಟ' ವಾಗಿದೆ ಯೆಂಬುದು ಸ್ಪಷ್ಟವಿದೆ; ಇನ್ನೊಂದು– 'ಅನುಭಾವ' ಅಂದಾಗ 'ಬ್ರಹ್ಮಜ್ಞಾನ' ವೆಂದರ್ಥವಾಗುವ ಅದು ಯಾವ ಜ್ಞಾನವೆಂಬುದನ್ನು ಸ್ಪಷ್ಟಪಡಿಸುತ್ತದೆ. 'ಅನುಭಾವವೆಂಬುದು

---

† "ಅನುಭವ ಶಬ್ದ ನಮಗೆ ಕಿರಿದಾಗಿ ಕಂಡರು ಅದರ ಅರ್ಥ ಸಂಪತ್ತಿಗೆ ಸೀಮೆಯೇ ಇಲ್ಲ. 'ಭವ' ಶಬ್ದಕ್ಕೆ ಶಿವನೆಂದು ಪ್ರಸಿದ್ಧಿಯಿದೆ, 'ಅನುಭವ' ಎಂದರೆ ಶಿವನ, ಶಿವನೊಡಗೂಡು, ಶಿವನಾಗು ಎಂದಾಗುತ್ತದೆ. ಎಡೆಯೂರು ಅನಾದಿ ತೋಂಟದ ಸಿದ್ಧಲಿಂಲಿಂಗೇಶರು ಅನುಭಾವವೆಂದರೆ "ಅಕಾರೋ ಲಿಂಗಮೇವೋಕ್ತಂ ನುಕಾರೋ ಜೀವ ಉಚ್ಯತೇ । ಭಾವ ಸಂಯೋಗ ಏವೋಕ್ತೋ ಅನುಭಾವೋ ನಿಗದ್ಯತೇ॥" ಎಂದು ಅಪ್ಪಣೆ ಕೊಡಿಸಿರುತ್ತಾರೆ."—ಕವೀಂದ್ರ, ಚಂದ್ರಶೇಖರ ಶಾಸ್ತ್ರಿಗಳು(ಸಂ), ಚಿದೈಶ್ವರ್ಯಂ ಚಿದಾಭರಣವೆಂಬ ಶಿವಾನುಭವ ಶಾಸ್ತ್ರವು, ಕಲ್ಮಠ ಕವಿತಾಳ (೧೯೫೭). ಪು. iii

ತಿಳಿದ ವಸ್ತು ಅದರಿಂದ ಭಿನ್ನವೆಂಬ ವಿಚಾರಕ್ಕೆ ಅವಕಾಶ ಕೊಡುವಂತಿದೆ. ಆದರೂ 'ಬ್ರಹ್ಮ' ಹಾಗೂ 'ಜ್ಞಾನ' ಭಿನ್ನ ಭಿನ್ನವಲ್ಲವೆಂಬ ಪ್ರಣಾಳಿಯೂ ಇದೆ. 'ಪ್ರಜ್ಞಾನಂ ಬ್ರಹ್ಮ'. ಅದೇ ರೀತಿ ಶಿವಶರಣರ ಪರಂಪರೆಯಂತೆ ಕೂಡ 'ಅನು' ಮತ್ತು 'ಭಾವ' ಭಿನ್ನ ಭಿನ್ನವಲ್ಲ. ಅಂದರೆ 'ಅನುಭಾವ'ವು ತನ್ನಿಂದನ್ಯವಲ್ಲ. ಆದುದರಿಂದ 'ಭವ' ಹಾಗು 'ಭಾವ'ಗಳು ಎರಡು ವೀರ ಶೈವ ಸಿದ್ಧಾಂತದ ಪರಿವಿಡಿಯಲ್ಲಿ 'ಕಲಾಶಕ್ತಿ' ಮತ್ತು 'ಭಕ್ತಿಶಕ್ತಿ'ಗಳಂತಿವೆ ಎಂದು ಗ್ರಹಿಸುವುದು ವಿಹಿತ. ಇದೇ ವಿಚಾರವನ್ನು ಪಾಶ್ಚಾತ್ಯ ಅನುಭಾವ ತತ್ವಜ್ಞಾನಿಗಳಲ್ಲಿ ಸುಪ್ರಸಿದ್ಧಳಾದ ಎವಿಲಿಯನ್ ಅಂಡರ ಹಿಲ್ ಎಂಬವಳು ಹೇಳುತ್ತಾಳೆ :[3]

**ಅನುಭಾವ ಗೀತ ಲಕ್ಷಣ :**

The poetry of mysticism might be defined on the one hand as a temperamentel reaction to the vision of Reality, on the other, as a form of prophecy." ಅವರು ಆತ್ಮದರ್ಶಿಗಳು, ಬ್ರಹ್ಮದರ್ಶಿಗಳು ಮತ್ತು ಆತ ಬ್ರಹ್ಮೈಕದರ್ಶಿಗಳು. ಅವರು ಕಂಡುದು "ರಸೋವೈಸಃ" ಎಂದು. ಇದು 'ಪರತತ್ವ ಪ್ರತ್ಯಕ್ಷ'. ಇದರಿಂದ ಭಿನ್ನವಾದುದು 'ಇಹತತ್ವ ಪ್ರತ್ಯಕ್ಷ'. ಮೊದಲನೆಯವರದು ಘನಮನದರ್ಶನ (supramental perception), ಎರಡನೆಯವರದು ತನುಮನ ಪ್ರತ್ಯಕ್ಷ (empirical perception) ಎರಡವನೆಯವರದು 'ವಾಕ್ಯಂ ರಸಾತ್ಮಕಂ ಕಾವ್ಯಂ'. ಅನುಭಾವಿಗಳು ಆತ್ಮಸಂವೇದನವನ್ನು ಜನಜೀವನದ ಸರಸಪ್ರತಿಮೆ ಗಳನ್ನು ಬಳಸುವವರಿಂದ (ಜನಸಾಮಾನ್ಯರಿಗೆ ಸುಲಭಗ್ರಾಹ್ಯವಾಗುವದನ್ನೇ) ಅಸಹಜ ಪರಿಚಯತೆಯನ್ನೇ ಸಾಧನಮಾಡಿಕೊಂಡು ಜನಸಾಮಾನ್ಯರ ಮನ ವನ್ನು ಸೂರೆಗೊಂಡು ಅದನ್ನು ಉದ್ದೀಪನಗೊಳಿಸಿ ಮಹದ ಮೃದುನತೆ ಯಲ್ಲಿ ತೊಡಗಿಸುವರು. ಅದು ಅವರ ಅನುಭಾವದ ಸತ್ವ. ದೀಪದ ಚುಂಬನ ದಿಂದ ಬತ್ತಿಯು ಜ್ಯೋತಿಯನು ಹೊತ್ತು ಜ್ಯೋತಿಯಾಗುವಂತಿದೆ ಇಲ್ಲಿಯ ಕಾರ್ಯ. ಅನುಭಾವ ಇಲ್ಲವೆ ಘನಮನ ಕಾವ್ಯ (supramental poetry)ದ ಉತ್ತಮಿಕೆಯಿದು. ಇಂಥ ಕಾವ್ಯ ಅಕ್ಕನ ವಚನ. ಇಂಥ ಕವಿಗಳ ವರ್ಗಕ್ಕೆ ಸೇರಿದವಳು ಮಹದೇವಿಯಕ್ಕ ಕವಿಯತ್ರಿ.

ದೃಷ್ಟಿಯಂತೆ ಸೃಷ್ಟಿಯೆಂದು ಆಗಮ ಉವಾಚ. ಅನುಭಾವ–ದೃಷ್ಟಿ ಅನುಭಾವ-ಸೃಷ್ಟಿಯನ್ನು ರಚಿಸಿ ಮನೋಸೃಷ್ಟಿಯ ಸಂಪತ್ತಿನಿಂದ ಉಪರಿಯಾದ ಸಂಪದವನ್ನು ಸೃಷ್ಟಿಸುತ್ತದೆ. ಅದರ ನಿಲುವು ಗಿರಿಶೃಂಗ, ತಾರಾಗಣ ಹಾಗೂ ಖಗದೆತ್ತರ. ಅವರ ಆಳ ಸಾಗರ, ಮನ, ಅತಿಮನದಾಳ. ಇದು ಮನ ಹಾಗೂ ಘನಗಳ ಗಾಢಾಲಿಂಗನ, ಇಲ್ಲವೆ ಮರ್ತ್ಯ, ಸ್ವರ್ಗಗಳ ಸುಮಧುರ ಸಮ್ಮಿಲನ. "As it is the special vocation of the mystical consciousness to mediate between twoorders,going out in loving adoration towards God and comming home to tell the secret of Eternity to other men; so the artistic self expression of this consciousness has also a double character. It is love poetry. but love poetry which is often written with a missionary intention."[4]

ಮೇಲಿನ ಪ್ರಾಸ್ತಾವಿಕ ವಿವರಣೆಯು 'ಅನುಭವ', 'ಅನುಭಾವ'ಗಳಲ್ಲಿರುವ ಅಂತರವನ್ನು ತಿಳಿಸುವುದರ ಜೊತೆಗೆ ಆ ಸಾಹಿತ್ಯದ ಬಗ್ಗೆ ನಮ್ಮಲ್ಲಿ ಸರಿಯಾದ ದೃಷ್ಟಿಕೋನ ಲಭ್ಯವಾಗಲು ಸಹಾಯವಾಗುತ್ತದೆ. ಪರಬ್ರಹ್ಮವನ್ನು ಅಥವಾ ಪರಮಾತ್ಮನನ್ನು ಪರಮಾತ್ಮದಿಂದ ತಿಳಿ (ಆತ್ಮಾನಾಂ ಆತ್ಮನಾ ಪಶ್ಯ)ದು ಪರಮಾನಂದ ಪರಮ ಸೌಂದರ್ಯಗಳಾಗಿ ಅಭಿವ್ಯಕ್ತವಾಗುವಲ್ಲಿ ಜನ ಜೀವನದ ಆತ್ಮೀಯ ಸಂಬಂಧದ ಸನ್ನಿವೇಶಾತ್ಮಕ ಪ್ರತಿಮೆ ಇಲ್ಲವೆ ರೂಪಕಗಳಲ್ಲಿ ಮೈದಾಳುವುದು ಅನುಭಾವಗೀತ. ಅಕ್ಕನ ವಚನಸಾಹಿತ್ಯವು ಇಂಥದಾಗಿದೆ. ಅವಳ ವಚನಗಳು ದಿವ್ಯೋನ್ಮಾದ ಹಾಗೂ ಹೃದಯಪೂರ್ಣವಾಗಿ ಇಲ್ಲವೆ ಕರುಣಾಪೂರ್ಣವಾಗಿವೆ ಹೊರಹೊಮ್ಮುವಲ್ಲಿ. ಜನಸಾಮಾನ್ಯರೂ ತಿಳಿಯಲು ಸುಲಭ ಭಾಷೆಯಲ್ಲಿ ಬರೆಯಲಾಗಿದ್ದು ಅವು ನೇರವಾಗಿ ಆತ್ಮಾನುಸಂಧಾನವನ್ನು ಎಚ್ಚರಗೊಳಿಸುತ್ತವೆ ಪ್ರತಿಯೊಬ್ಬ ಓದುಗನಲ್ಲಿ ಇಲ್ಲವೆ ಕೇಳುಗನಲ್ಲಿ. ಒಂದು ಮತೀಯ ಪರಿಭಾಷೆಯು ಅಲ್ಲಲ್ಲಿ ಕಂಡು ಬಂದರೂ ಬಹು ಮುಖ್ಯವಾದ ವಿಷಯವೆಂದರೆ ಮತವನ್ನು ವಿಶ್ವಮತವಾಗಿಸುವ ಹಾಗೂ ವಿಶ್ವ ಮತ ವಸ್ತು ಬೋಧಕವಾಗಿ ವಿಶ್ವತೋ ಮುಖಿ, ವಿಶ್ವತೋಚಕ್ಷುಗಳನ್ನಾಗಿಸುವುದು ಈ ಗೀತಗಳ ವಿಲಕ್ಷಣತೆಯಾಗಿದೆ. ಜಗತ್ತಿನ ಎಲ್ಲ ಅನುಭಾವಿಗಳಲ್ಲಿಯೂ

ಈ ಒಂದು ವಿಲಕ್ಷಣವಾದ ಸಾಮ್ಯವನ್ನು ಕಾಣುತ್ತೇವೆ. ಬಂಧನದಿಂದ ಬಿಡುಗಡೆಯತ್ತ ಗಮಿಸುವ ರಸಯಾತ್ರೆ, ದಿವ್ಯಯಾತ್ರೆಗಳ ಸಜೀವತೆ ಮೈದಳೆದು ಮಾನವನಲ್ಲಡಗಿರುವ ಪರಮಾತ್ಮ ತತ್ವದ ಉದಯೋನ್ಮುಖತೆಯನ್ನಿಂಥ ಗೀತಗಳು ಬಹು ರಮ್ಯವಾಗಿ ಅಭಿವ್ಯಕ್ತಗೊಳಿಸುತ್ತವೆ. ಇದು ಆತ್ಮ ಸ್ವಾತಂತ್ರ್ಯತೆ, ವಿಶ್ವಾತ್ಮತತೆಗಳ ಸಲ್ಲಕ್ಷಣತೆ.

ಅಕ್ಕನು ಬಳಸಿರುವ ಸುಲಭ ಉಪಮಾನಗಳು,ಬಯಕೆಗಳಿಗಿತ್ತ ಕರೆಗಳು, ಅನಿಸಿಕೆಗಳು, ಬಾಂಧವ್ಯಗಳು ಅಲ್ಲದೆ ಗುರುಶಿಷ್ಯರ ಸಂಬಂಧ, ಸತಿಪತಿಭಾವ, ಪ್ರಿಯತಮ ಮತ್ತು ಪ್ರೇಯಸಿಯರ ಅನಿಸಿಕೆಗಳು, ಮದುವಣಿಗ ಮದುವಳಿಗೆಯರ ಉತ್ಸಾಹಗಳು, ಪಶುಪಕ್ಷಿ, ತರುಲತೆಗಳ ನವ್ಯ ಭವ್ಯ ಸುಪ್ತ ಸುವ್ಯಕ್ತ ಭಾವಗಳು, ಜ್ಞಾನಿ ಅಜ್ಞಾನಿಗಳೀರ್ವರಲ್ಲಿಯೂ ತಮಗೂ ಹಾಗೂ ಪರತತ್ವದ ಮಧುರ ಸಂಬಂಧ ಮತ್ತು ಅದು ತಮ್ಮಲ್ಲಿಯೇ ಇದ್ದು ಬೇರೆಡೆ ಇದ್ದು ಬೇರೆಡೆ ಇದ್ದಂತೆ ಭಾಸದಾಗುವ ವೈಚಿತ್ರ್ಯಗಳ ಅರಿವನ್ನುಂಟುಮಾಡುವವು. ತನ್ಮಯತೆ, ತಲ್ಲೀನತೆಗಳು ಈ ಪ್ರತಿಮೆ, ರೂಪಕಗಳ ವೈಶಿಷ್ಟ್ಯ, ಅವನ್ನಿಲ್ಲಿ ನೋಡುತ್ತೇವೆ. ಇದು ವಿಶ್ವಕಾವ್ಯದ ಲಕ್ಷಣ.

**ಅನುಭವ ವಿವರಣೆ :**

ಪರ್ವತ ಶ್ರೇಣಿಯಲ್ಲಿ, ದರಿ ಹೊನಲಲ್ಲಿ, ಗಿರಿ ಕಂದರಗಳ ಹಚ್ಚ ಹಸುರಿನಲ್ಲಿ, ಎಳೆ ಬೆಳದಿಂಗುಳಲ್ಲಿ, ತಂಗಾಳಿಯಲ್ಲಿ, ಗುಂಜಾರವವನ್ನು ಹರಡುತ್ತ ಹೊಯ್ದಾಡುವ ತುಂಬಿಯ ಹಾಡಿನಲ್ಲಿ, ನರ್ತಿಸುವ ನವಿಲೆಯ ನರ್ತನದಲ್ಲಿ, ವರ್ತಿಸುವ ಹಂಸೆಯ ಪರ್ತನದಲ್ಲಿ, ಮಾಮರದ ಪಲ್ಲವದಲ್ಲಿ, ಕೋಗಿಲೆಯ ಕೂಜನದಲ್ಲಿ, ತಾರೆ ಬೀಡುಬಿಟ್ಟ ತೇಜೋವಲಯದ ತೇಜದಲ್ಲಿ, ಕಾರ್ಮುಗಿಲೊಡಲಲ್ಲಿ ಸೆಳವ ಮಿಂಚಿನ ಲೀಲೆಯಲ್ಲಿ ಒಟ್ಟಿನ ಮೇಲೆ ಪ್ರಕೃತಿಯ ನೂರು ನೂರುಭಾವ, ವೇಷಗಳಲ್ಲಿ ತನ್ನಿನಿಯನನ್ನರಸುವ ಈ ಅನುರಾಗ ಗೀತೆಗಳು ದಿವ್ಯ ಭವ್ಯ ರಸಸೃಷ್ಟಿಯ ಸೃಷ್ಟಿಯಾಗಿವೆ. ಕವಿ ರವೀಂದ್ರರ ಗೀತಾಂಜಲಿಯಲ್ಲಿ ಇಂಥದೇ ಉಜ್ವಲಪ್ರೇಮವು ಪಕ್ಷಿಯಾಗಿ, ಕೊಳಲಾಗಿ, ಗಿರಿಕಂದರದ ಹಚ್ಚಹಸುರಾಗಿ, ಬೈಗುಬೆಳಗುಗಳ ವೈಭವವಾಗಿ... ಮೈವೆತ್ತಿಡುವುದನ್ನು ನೋಡಬಹುದು. ಈ ದೈವೋನ್ಮಾದವು ನಿಸರ್ಗದ ಸೌಂದರ್ಯ, ರಾಗಸಮ್ಮೋಹನಕ್ಕೆ ಹೊಸ ಬೆಡಗನ್ನು, ಅರ್ಥವನ್ನಿತ್ತಿದೆ. ಇದು ಅವಳ

ವೈಯಕ್ತಿಕ ಅನುಭವ (personal mysticism)ದ ಕುರುಹು ಹಾಗೂ ಅರಿವು. ಇದು ಅನುಭಾವ ಜೀವನದ ಪ್ರಭಾವೀ ಲಕ್ಷಣಗಳಲ್ಲೊಂದು. ಈ ಮಾತು ಅವಳು ಅನುಭಾವ ಜೀವನವನ್ನು ಲಕ್ಷಣಿಸುವದರಿಂದ ಗೊತ್ತಾಗುತ್ತದೆ.*

> ಅಯ್ಯಾ, ನೀನು ಕೇಳಿದರೆ ಕೇಳು, ಕೇಳದಿರ್ದಡೆ ಮಾಣು:
> ಆನು ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯಾ !
> ಅಯ್ಯಾ, ನೀನು ನೋಡಿದಡೆ ನೋಡು ನೋಡದಿರ್ದಡೆ ಮಾಣು;
> ಆನು ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯಾ !
> ಅಯ್ಯಾ, ನೀನು ಮೆಚ್ಚಿದಡೆ ಮೆಚ್ಚು ಮಚ್ಚದಿರ್ದಡೆ ಮಾಣು ;
> ಆನು ನಿನ್ನ ಮೆಚ್ಚಿಸಿದಲ್ಲದೆ ಸೈರಿಸಲಾರೆನಯ್ಯಾ !
> ಅಯ್ಯಾ, ನೀನೇ ಒಲಿದಡೆ ಒಲಿ ಒಲಿಯದಿರ್ದಡೆ ಮಾಣು:
> ಆನು ನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯಾ !
> ಚೆನ್ನ ಮಲ್ಲಿಕಾರ್ಜುನಯ್ಯಾ ಆನು ನಿಮ್ಮನರ್ಚಿಸಿ ಪೂಜಿಸಿ
> ಹರುಷದೊಳೋಲಾಡುವೆನಯ್ಯಾ †

ಅನುಭಾವಿಯು ಕಲೆಗಾರ ಮತ್ತು ರಸಿಕ. ಆತನ ಆತ್ಮ ಪ್ರಪ್ರಥಮವಾಗಿ ದಿವ್ಯ ಭಾವೋನ್ಮಾದಿನಿ. ಅದು ಹಾಡುವುದು, ನೋಡುವುದು, ಅಪ್ಪುವುದು ಕೊನೆಗೆ ಪೂಜಿಸಿ ಹರುಷದೊಳೋಲಾಡುವುದು. ಇವುಗಳು ಅನುಭಾವಿ ಜೀವನದ ಪ್ರಮುಖ, ಸ್ಫುಟವಾದ ಲಕ್ಷಣಗಳು. ಲಿಂಗಭೇದವಿಲ್ಲದೆ ಅನ್ವಯಿಸುವಂಥವು. ಈ ಮಾತಿಗೆ ಅನುಭಾವ ಶಾಸ್ತ್ರದ ತಾತ್ವಿಕ ತಳಹದಿ ಇರುತ್ತದೆ. ದೈಹಿಕವಾಗಿ ಸ್ತ್ರೀ ಪುರುಷ ಭೇದವಿರುವುದಲ್ಲದೆ ಆತ್ಮ ದೃಷ್ಟಿಯಿಂದ ಅಭೇದವು ಇರುವದಿಲ್ಲ. ದೇವರದಾಸಿಮಯ್ಯರ ಅನುಭವವು ಹೀಗಿದೆ;‡ ಮೊಲೆ ಮುಡಿ ಬಂದರೆ ಹೆಣ್ಣೆಂಬರು ಗಡ್ಡ ಮೀಸೆ ಬಂದರೆ ಗಂಡೆಂಬರು. ನಡುವೆ ಸುಳಿವಾತ್ಮನು ಗಂಡೂ ಅಲ್ಲ. ಹೆಣ್ಣೂ ಅಲ್ಲ ಕಾಣಾ ರಾಮನಾಥಾ. ಆದ್ದರಿಂದಲೇ ಸ್ಥಿತಪ್ರಜ್ಞನು ಅಥವಾ ಆತ್ಮಜ್ಞಾನಿಯು ಆಕಳು, ಶುನಿ. ಬ್ರಾಹ್ಮಣರಲ್ಲಿ ಭೇದವನ್ನು ಕಾಣಲಾರನು ಎಂದು ಪುರಾತನ ಶಾಸ್ತ್ರವಿಚಾರ, ಈ ಆತ್ಮ ತತ್ವಾಧಾರಿತವಾಗಿಯೇ 'ಅಹಿಂಸಾ ಪರಮೋಧರ್ಮಃ' ಎಂಬ ಆರ್ಯ ಸತ್ಯವು ಸಂಸ್ಥಾಪಿತವಾಗಿದೆ.

ಭಾರತೀಯರಲ್ಲಿ ಕಂಡುಬರುವ ಅನುಭಾವಿಗಳಲ್ಲಿ ಹಾಡುವವರೇ ಆಗಿದ್ದಾರೆ. ಇದೇಮಾತನ್ನು ನಾವು ಹೀಗೆ ಹೇಳಬಹುದು. ಅನುಭಾವ

ಜೀವನವು ಹಾಡಿನಿಂದಲೇ ಪ್ರಾರಂಭ. ಅನುಭಾವಿಗಳಲ್ಲಿ, ಆದ್ದರಿಂದ, ಹಾಡಿದವರು ಇರುತ್ತಾರೆ. ಹಾಡದವರು ಅನುಭಾವಿಗಳಲ್ಲೇನು ಎಂಬ ಪ್ರಶ್ನೆ ಬರಬಹುದು. ಆದುದರಿಂದ, ಅನುಭಾವಿಗಳು ಹಾಡರುಚಿಸುವ ಸಾಮರ್ಥ್ಯ ಇಲ್ಲದವರಿದ್ದರೂ ಹಾಡನ್ನು ಅವರು ಕಲಿತುಕೊಂಡಾದರೂ ಹೇಳಲೇಬೇಕು. ಇದು ಆ ದಾರಿ. ಭಾರತೀಯ ಅನುಭಾವ ಸಾಹಿತ್ಯಚರಿತ್ರವನ್ನು ಅವಲೋಕಿಸಿದರೆ ಅನುಭಾವಿಗಳೆಲ್ಲ ಹಾಡುವವರು. ಹಾಡುವುದು ಅನುಭಾವಿಗಳ ಪ್ರಮುಖ ಲಕ್ಷಣಗಳಲ್ಲೊಂದು. ಅನುಭಾವಿಗಳು ಮುಖ್ಯತ: ಅನುಭಾವವನ್ನು ಹಾಡಾಗಿ ಹರಿಸಿ ಹರುಷಗೊಳ್ಳುವದು ತಲ್ಲೀನವಾಗುವುದು. "ಆಡಿಹಾಡಿಹರಯ್ಯಾ ಹಾಡಿಹರಯ್ಯಾ ಮನಬಂದ ಪರಿಯಲಿ! ಶಿವಶರಣರಮುಂದೆ ಆಡಿಹರಯ್ಯಾ ಹಾಡಿಹರಯ್ಯಾ !!"[7] "ಆಡುತ್ತ ಹಾಡುತ್ತ ಭಕ್ತಿಯ ಮಾಡಬಹುದು".[8] ಎಂದ ಬಸವಣ್ಣನವರು. ಹಾಡಿನ ಹಿರಿಮೆಯನ್ನು ಭಕ್ತಿಯ ಮಾಡಲು ಹಾಡು ಪ್ರಪ್ರಥಮ ಅವಶ್ಯಕತೆಯಾಗಿದೆ. ಹಾಡುವುದು ಸಹಜವಾಗಿ ಎಂಬ ಮಾತನ್ನು 'ಆಡುತ್ತ' 'ಆಡುತ್ತ' ಎಂದು ಹೇಳಿದ್ದಾರೆ 'ಆಡಾಡತ ಕೆಲಸ ಮುಗಿಸಿದೆ' ಎಂಬ ಮಾತನ್ನು ಜನಸಾಮಾನ್ಯರು ಬಳಸುವರು. ಅದರರ್ಥ 'ಸಹಜವಾಗಿ' ಎಂದಾಗುವದು. 'ಸಹಜತೆ' ಎಂಬುದು ಹಾಡಿನ ಹುಟ್ಟುಗುಣ. ಇದು 'ಭಕ್ತಿಗೆ' ಅಥವಾ 'ಅನುಭಾವ'ಕ್ಕೆ ಅತ್ಯಂತ ಪ್ರಥಮ ಅವಶ್ಯಕತೆಯಾಗಿರುವಂತೆ ಹೆಜ್ಜೆಯೂ ಹೌದು. ಯಾಕೆಂದರೆ 'ಅನುಭಾವ ಎಂಬುದು ದೇವರದು. ದೇವರಿಲ್ಲದ ಅನುಭಾವ ವಿಲ್ಲ ಎಂಬ ಸಿದ್ಧಾಂತವರುವುದನ್ನು ಪಾಶ್ಚಾತ್ಯ ಅನುಭಾವ ತತ್ವಜ್ಞಾನವನರಿತವರಿಗೆ ಹೊಸದೇನಲ್ಲ. ಭಾರತೀಯರಿಗೆ ಇದು ಅಸಹಜ. ಯಾಕೆಂದರೆ ಅನುಭಾವವೆಂಬುದು 'ಅಂತರಂಗದ ರತ್ನ' ಅನುಭಾವವೆಂಬುದು ತನ್ನತಾನರಿವುದು ಅನುಭಾವವೆಂಬುದು ಜೀವಪರಮರ ಮಧುರ ಸಂಬಂಧವಾಗಿರುವಂತೆ. ಭಾರತೀಯ ಅನುಭಾವಿಗಳ ಈ ಸಿದ್ಧಾಂತದ ಪ್ರಕಾರ ಅನುಭಾವವು ಸೇಶ್ವರ ಹಾಗೂ ನಿರೀಶ್ವರವೆಂದಿತ್ತೆರನಾಗದೆ. ಆದರೂ 'ಹಾಡು' ಮಾತ್ರ ಸೇಶ್ವರ, ಹಾಗೂ ನಿರೀಶ್ವರ ಅನುಭಾವಿಗಳಿಗೀರ್ವರಿಗೂ ಬೇಕೆಬೇಕು. ಭಾರತೀಯ ಅನುಭಾವಿಗಳ ಚರಿತ್ರೆಯನ್ನವಲೋಕಿಸಿವರೆ ಅವರು ತಮ್ಮ ಅನುಭಾವವನ್ನು ಹಾಡಿ ತನ್ಮಯವಾಗುವರು. ಅದೇ 'ನಾಮಸಂಕೀರ್ತನ

ಅನುಭಾವ ಮಾರ್ಗದ ತಾಂತ್ರಿಕ ಶಬ್ದದಲ್ಲಿ ತಿಳಿಸುವದಾದರೆ 'ವಾಚಕ ಜಪ' ಎಂದೆನ್ನುವರು. ಅವರ ಮಾತುಗಳೆಲ್ಲ ಗೀತಗಳು. ಅವೆಲ್ಲ ಜ್ಯೋತಿಗಳು. ಜನದ ಮನದ ಮೈಲಿಗೆಯ ಕಳೆವವು. ಅವು ಮಂತ್ರಗಳು. ಆದ್ದರಿಂದ ದೇವ ಸಾಕ್ಷಾತ್ಕಾರ. ಆದ್ದರಿಂದಲೇ ಅನುಭಾವಿಗಳು 'ಶರಣರ ಸೂಳ್ನುಡಿಯ ನ್ಲೊಂದರಗಳಿಗೆಯಿತ್ತಡೆ ನಿನ್ನ ನಿತ್ತೆ ಕಾಣಾ ರಾಮನಾಥಾ!"[೯] ಎಂದು ದೇವರ ದಾಸಿಮಾರ್ಯರ ಉದ್ಗಾರ. 'ಶರಣರ ನುಡಿಗಡಣದಲ್ಲಿ ಶಿವನು ರಾಸಿಯಾಗಿಪ್ಪ' ನೆಂದು ಬಸವಣ್ಣನವರು ಹಾಡಿದ್ದಾರೆ. ಇದು ಅನುಭಾವ ಜೀವನದ ಪ್ರಥಮ ಲಕ್ಷಣದ ಸಿದ್ಧಾಂತ. ಹಾಡಿನ ಹಿರಿಮೆಯನ್ನು ಬಸವಣ್ಣನವರು ವಿವರಿಸುತ್ತ ಹಾಡಿದ್ದು;[೧೧]

> ವಚನದಲ್ಲಿ ನಾಮಾಮೃತ ತುಂಬಿ
> ನಯನದಲ್ಲಿ ನಿಮ್ಮ ಮೂರುತಿ ತುಂಬಿ
> ಕಿವಿಯಲ್ಲಿ ನಿಮ್ಮ ಕೀರ್ತಿಯು ತುಂಬಿ
> ಕೂಡಲ ಸಂಗಮದೇವ ನಿಮ್ಮ ಚರಣ ಕಮಲದೊಳಗಾನು ತುಂಬಿ.

ಇದು ಬಹು ಗರ್ಭಿತಾರ್ಥವುಳ್ಳ ವಿವರಣೆಯಾಗಿದೆ. ಹಾಡು ನಾಮಾಮೃತ ದಿಂದ ತುಂಬಿ ಕೊಂಡಿರುವುದರಿಂದ ವಸ್ತು ಪ್ರತ್ಯಕ್ಷವಾಗುವುದು. 'ನಾಮ' ಹಾಗೂ 'ಅರ್ಥ'ಗಳು ಬಿಚ್ಚಿ ಬೇರಾಗದಂತಿರುವುದು ಇವರ ಸಿದ್ಧಾಂತ. ನಯನ ಮನೋಹರವಾದ ಆ ಮೂರ್ತಿಯ ಕೀರ್ತನ-ಗುಣಗಾನ-ದಿಂದ ಕಿವಿಯ ಪ್ರವೇಶವಾಗಲು ಆ ಪರಮ ಪುರುಷನ ಅಡಿದಾವರೆಯಲ್ಲಿರುವ ಮಧುವನ್ನುಂಡು ಮೈಮರೆವ ಅವಸ್ಥೆ ಸಹಜ, ಸುನಿಶ್ಚಿತ. ಇದು ಹಾಡಿನ ಮನೋವಿಜ್ಞಾನ, ವಸ್ತು ಸಿದ್ಧಾಂತಗಳುಳ್ಳ 'ಅನುಭಾವ' ಹಾಡೆಂಬುದು ಕೇವಲ ನಾದವಲ್ಲ ಅಂದರೆ ರಾಸಾಲಾಪನೆಯಲ್ಲ. ಅದು 'ರಾಗ' ಹಾಗೂ 'ಭಕ್ತಿ'ಗಳ ಸಮ್ಮಿಲನ ಅಥವ ಸಂಪುಟ. 'ನಾದ' ಮತ್ತು 'ಭಕ್ತಿ'ಗಳು ಸೇರಿ ಹಾಡಾಗುವುದರಿಂದ ಶಿವನನ್ನು ಸುಲಭದಿಂದೊಲಿಸಿಕೊಳ್ಳುವ ಅತ್ಯುತ್ತಮ ಸಾಧನವಾಗಿದೆಯೆಂದು ಅನುಭಾವಿಗಳು ಈ ವಿಧಾನವನ್ನು ಚೆನ್ನಾಗಿ ಬಳಸಿ ಕೊಂಡರು. ಆದುದರಿಂದ ಅನುಭಾವಮಾರ್ಗದಲ್ಲಿ ಅಕ್ಕಮಹಾದೇವಿಯು ಹಾಡಿಗೆ ಪ್ರಥಮ ಪ್ರಾಶಸ್ತ್ಯವನ್ನು ಕೊಟ್ಟದು ಅತ್ಯಂತ ಶಾಸ್ತ್ರೀಯವಾಗಿದೆ ಯೆಂಬುದಕ್ಕೆ ಇನ್ನೂ ವಿವರಣೆಯು ಬೇಕೆಂದೆನಿಸುವದಿಲ್ಲ. ಬಸವಣ್ಣನವರು

"ಬತ್ತೀಸರಾಗವ ಹಾಡಯ್ಯ !" ಯೆಂದು ದೇವರ ಕೈಯಲ್ಲಿ ತಮ್ಮ ತನುನೆಂಬ ದಂಡಿಗೆಯನ್ನು ಕೊಡಲಿಚ್ಛಿಸಿದ್ದಾನೆ. ಅಲ್ಲಿ ಬರುವ ಹಾಡು ಅವಹಾಡಿದ್ದು, ಅಂದರೆ ಆತ್ಮಗೀತ (ಅನುಭಾವ) ಗಳೇ ವಿನಃ ಮನಗೀತಗಳಲ್ಲ (ಭಾವಗೀತೆಗಳಲ್ಲ) ಎಂದು ಹೇಳಿದ್ದನ್ನಿಲ್ಲಿ ಸ್ಮರಸಿಕೊಳ್ಳಬಹುದು. 'ಭಕ್ತಿ' ಹಾಗೂ 'ಗಾಯನ' ಗಳೆರಡು ಅನುಭಾವಿಯ ಜೀವನದ, ಅವ್ಯ ಅವಶ್ಯಕತೆಗಳು. ಇದ ನಂತರ ಬೇರೊಂದು ಅನುಭಾವೀ ಜೀವನದ ಲಕ್ಷಣವೆಂದು ಮಹಾದೇವಿಯಕ್ಕ ತಿಳಿಸುತ್ತಾಳೆ. ಆದನ್ನು 'ನೋಡುವುದು' ಆಗಿರುತ್ತದೆ.

**ನೋಟ :**

'ನೋಟ'ದ ಮಹತಿಯು ಜೀವನದ ಯಾವುದೇ ರಂಗದಲ್ಲಿ ಅತ್ಯುನ್ನತ ವಾದುದು. ನೋಟದ ವರ್ಣಮಯವಾದ ವಿವರವನ್ನು 'ವ್ಯಾವಹಾರಿಕ' ಹಾಗೂ 'ಅನುಭಾವಿಕ' ಜೀವನಗಳೆರಡರಲ್ಲಿಯೂ ಬಳಸಿದ ಒಂದು ಅತ್ಯು–ತ್ಕೃಷ್ಟವಾದ ಪ್ರತಿಮೆಯೆಂದರೆ ಪತಂಗದ ಸರ್ವಾರ್ಪಣತೆ. ಪತಂಗದ ಸರ್ವಾರ್ಪಣವು ನೋಟದಿಂದಲೇ ಎಂಬುದರಿಂದ ನೋಟದ ಸಾದುರ್ಥ್ಯವನ್ನು ಊಹಿಸಬಹುದಾಗಿದೆ. ನೋಟವು ಪ್ರಾಣಕ್ಕೆ ಪ್ರಾಣ. ಯಾಕಂದರೆ ಪ್ರಾಣದ ಕಾರ್ಯಕ್ಕೆ ನೋಟವೇ ಜೀವಾಳವಾಗಿದೆ. ನೋಟದಿಂದ ಪ್ರಾಣದ 'ಸಂಚಲನ' ಪಲನ ಹಾಗೂ 'ಸಂಗ್ರಹಣ'. ನೋಟವನ್ನು ನಾವು ಎರಡು ವಿಧದಲ್ಲಿ ವಿವರಿಸಿ ಲಕ್ಷಣಿಸಬಹುದು. ಒಂದು— ಅದು ಅವಲೋಕನ ಮಾತ್ರವಾಗಿದ್ದು ಕೆಲವು ಸಲ ಕೇವಲ ಭಾವುಕತೆಯ ಜಾಗೃತೆಯ ಜಾಗೃತಿಗೆ ಕರಣವಾಗಿರುವುದು; ಇನ್ನೊಂದು__ ಹರಿವ ಮನವನ್ನು ತನ್ನ ಇಷ್ಟದೇವತೆಯಲ್ಲೋ ಅಥವ ಅಂತರ್ಲಕ್ಷ್ಯದಲ್ಲಿಯೋ ನಿಲ್ಲಿಸುವ ಸಾಧನವಾಗಿರುವದು. ಭಾವುಕತೆಯ ತೀವ್ರತೆಯಲ್ಲಿ ಪರಿಣಾಮಗಳು ಬೇರೆ ಬೇರೆಯಾಗಿವೆ. ಅವುಗಳನ್ನು ನಾವು ಊರ್ಧ್ವ ಹಾಗೂ ಅಧೋಗಾಮಿ ಪರಿಣಾಮಗಳೆಂದು ಎರಡು ರೀತಿಯುವೆಂದು ವಿಭಾಗಿಸಬಹುದು. ( Super cooscious and subconscious ) ಊರ್ಧ್ವ ಹಾಗೂ ಅಧೋ ಗಾಮಿಯಾದಾಗ 'ಅಹಂಕಾರ'ದ 'ವಿಚ್ಛಿದ್ರೀ ಕರಣ' ಇಲ್ಲವೆ 'ನಾಶ'ವಾಗುವುದು. ಇಲ್ಲಿ ಹರಿವ ಮನದ ನಿಯಂತ್ರಣವಿರುವ

ದಿಲ್ಲವೆಂಬುದು ಗಮನಾರ್ಹ ಸಂಗತಿಯಾಗಿದೆ. ಇವುಗಳಿಂದ ಭಿನ್ನವಾದಂಥ ಬೇರೆ ಕ್ರಿಯೆಯೊಂದು ಉಂಟು. ಅದು ಹರಿವ ಮನವನ್ನು ನಿಯಂತ್ರಿಸುವುದಾಗಿದೆ. ಇಲ್ಲಿ ಅಧಃಪ್ರವೃತ್ತಿಯು ಇಲ್ಲವೆ ಊರ್ಧ್ವ ಪ್ರವೃತ್ತಿಯು ಪ್ರಮೇಯವೇ ಇರುವದಿಲ್ಲ. ಕೇವಲ ಚಿತ್ತ ವೃತ್ತಿಯ ಸ್ಥಿರೀಕರಣ. ಇದು ಆಯಾ ತತ್ವಸಿದ್ಧಾಂತಗಳಿಗನುಸರಿಸಿ ಬೇರೆಬೇರೆ ಅರ್ಥ ಕೊಡುವದು. ಈ ಕ್ರಿಯೆಯಿಂದ ಆತ್ಮಾರೋಹಣ ಇಲ್ಲವೆ ಆತ್ಮಾವತರಣ ಸಂಭವ. ಇದರಿಂದ 'ಅಹಂ' ಎಂಬುದು ತನ್ನ ಕಾರಣತತ್ವದಲ್ಲಿ ಲಯವಾಗಿ ಹೋಗುವದು. ಈ ಎರಡರ ಸಮನ್ವಯವನ್ನು ಅಕ್ಕನ ಅನುಭಾವ ಮಾರ್ಗದ ದ್ವಿತೀಯ ಲಕ್ಷಣವೆಂದು ಗ್ರಹಿಸಬಹುದು.

ನೋಟವು 'ಭಾವುಕತೆ'ಯ ತೀಕ್ಷ್ಣತೆಯ ಶಮನಕ್ಕೆ ಒಂದು ಪರಮ ಔಷಧವು. 'ಒಲಿವತಾವಿಂಗೆ ನೋಟವೇ ಜೀವಾಳವಯ್ಯ' ಎಂದು ಬಸವಣ್ಣನವರು ಭಕ್ತಿಯ ತೀವ್ರತೆಯ ಶಮನವು ನೋಟದಲ್ಲಿದೆಯೆಂಬುದನ್ನು ಮನಂಬುಗುವ ರೀತಿಯಲ್ಲಿ ಚಿತ್ರಿಸಿದ್ದಾರೆ. ಇದ್ಕಂಕಿತಲೂ ಮಿಗಿಲಾದ ರೀತಿಯಲ್ಲಿ ನೋಟದ ಹಿರಿಮೆಯನ್ನು ವಿವರಿಸುವದು ಅಸಾಧ್ಯವೆಂದು ಬೇರೆ ಹೇಳಬೇಕಿಲ್ಲ. ಅಂತರಂಗದ ಕಣ್ಣು ನಿರಾಕಾರದಲ್ಲಿ, ಬಹಿರಂಗದ ಕಣ್ಣು ಸಾಕಾರದಲ್ಲಿ ಪರಿಣಮಿಸುತ್ತವೆ. ಅಥವಾ ಪರಿಣಾಮವನ್ನೈದುತ್ತವೆ. ಅನುಭಾವಿಯ ಸಕಲ, ನಿಃಕಲಾನುಭವಗಳ ವಲಯಗಳಲ್ಲಿ ನೋಟವು ಎರಡನೇ ಲಕ್ಷಣವಾಗಿದೆ, ದೈಹಿಕ, ಮಾನಸಿಕ, ಅಧ್ಯಾತ್ಮಿಕ ಅಥವ ಅತಿಮಾನಸಿಕ ನೋಟವು ನೋಟ, ತತ್ವಜ್ಞಾನಿಯ ಬ್ರಹ್ಮವನ್ನೂ, ಭಕ್ತನ ದೈವವನ್ನೂ ಈ ನೋಟವು ಸಮನ್ವಯಗೊಳಿಸುವುದೆಂದು ಇದರಿಂದ ಸ್ಪಷ್ಟವಾಗುತ್ತದೆ.

ನೋಟದ ಯೋಗ ವೈಜ್ಞಾನಿಕಮಹಿಮೆಯು ಇನ್ನೂ ಶ್ರೇಷ್ಠವಾದುದು. ಯೋಗತಂತ್ರವು ಅನುಭಾವ ವಿಜ್ಞಾನವಾಗಿದೆ. ಯೋಗ ವಿಜ್ಞಾನದಲ್ಲಿಯ ವಿಧಾನಗಳು ಬಹು ಸ್ಥೂಲವಾಗಿ ಎರಡು ಎಂದು ವರ್ಗೀಕರಿಸಬಹುದು. ಒಂದು ಹರಿವ ಮನವು ಪ್ರಾಣಾಧಾರಿತವಾದ ಕಾರಣ ಅದನ್ನು ಪೂರಕ, ಕುಂಭಕ ರೇಚಕಗಳಿಂದ ಸಂಗ್ರಹಿಸಬಹುದಾಗಿದೆ. ಪೂರಕ, ಕುಂಭಕ ಹಾಗೂ ರೇಚಕಗಳು ನಾಶಿಕದ ಮುಖಾಂತರ ನಡೆವುವು. ಇದು ನೋಟಕ್ಕೆ ಸಂಬಂಧಿಸಿದ್ದು.

ಆ ರೂ ನಯನೇಂದ್ರಿಗಳ ನೋಟಕ್ಕೆ ಸಂಬಂದಿಸಿದ್ದಲ್ಲ. ನಯನೇಂದ್ರಿಗಳ ನೋಟಕ್ಕೆ ಸಂಬಂಧಿಸಿದ್ದು ಅಕ್ಕನ ವಚನವಲ್ಲಿರುವದರಿಂದ ಅದನ್ನು·ಅರಿತು ಇಲ್ಲಿ ವಿವರಿಸಬೇಕಾಗಿದೆ. ಕಾರಣ 'ನೋಟ'ವೆಂದರೆ ನಯನೇಂದ್ರಿಯ ನೋಟವೇ ಸೈ. ನಯನೇಂದ್ರಿಯ ನೋಟಕ್ಕೂ ಪ್ರಾಣದ ಸಂಚಲನ ಸಂಗ್ರಹಕ್ಕೂ ಸಂಬಂಧವಿದೆ. ಕಾರಣ ನೋಟದಿಂದ ಪ್ರಾಣದ ಸಂಚಲನ ನಿಂತು ಆತ್ಮದ ಪ್ರತ್ಯಕ್ಷ. ಈ ಅನುಭವ ದರ್ಶನದಲ್ಲಿ ಅಕ್ಕನದು ಮೇಲುಗೈ. ಯೋಗಾಂಗತ್ರಿವಿಧಿಯು (ವಚನಗಳಂತೆ) ಅವಳ ಅನುಭವ ಸಾರ. ಈ ಎರಡೂ ವಿಧಾನಗಳಲ್ಲಿ ಅಕ್ಕನಿಗೆ ಪರಿಣತಿ. ಅವಳು 'ನೋಟ'ವು ನೋಡು ವದರಲ್ಲಿ ತರಹರವಾಗುವದೆಂಬುದರಿಂದ ಅದು ಅನುಭಾವ ಜೀವನದ ಎರಡನೆಯ ಲಕ್ಷಣವಾಗಿದೆ ಇದರ ನಂತರದ 'ಅನುಭಾ' ಪದ್ಧತಿಯ ಲಕ್ಷಣ 'ಕೂಡುವದು'.

**ಅಪ್ಪು= ಕೂಟ ಹಾಗೂ ಶರಣಾಗತಿ :**

"ಕಣ್ಣು ಕಂಡಲ್ಲದೆ ಮನಸನೆಯಾಡು. ಆ ಮನ ನೆನೆದಲ್ಲಿಗೆ ಕಾಲು ನಡೆವುದು."[11] ಎಂದು ಪ್ರಭುದೇವರು ಹಾಡುತ್ತಾರೆ. ಬಸವಣ್ಣನವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ "ಕಂಡರೆ ಮನೋಹರವಯ್ಯಾ; ಕಾಣದಿದ್ದರೆ ಅವಸ್ಥೆ ನೋಡಯ್ಯಾ! ಹಗಲು ಇರುಳಹುದು ಇರಳು ಹಗಲಹುದು."[12] ಎಂದು ಕಾಣುವ ಹಂಬಲದಲ್ಲಿ ತರಹರವಾಗುವ ಕೂಟದ ಹಿರಿಮೆಯನ್ನು ಎತ್ತಿ ತೋರಿಸಿದ್ದಾರೆ. ನೋಟದ ಮುಂದಿನ ಬಯಕೆಯೇ ಕೂಟ. ಇದು ಮಾನಸಿಕ ಬೆಳವಣಿಗೆ. ಕೂಟವು ಅನುಭಾವದಲ್ಲಿ ಎರಡನೆಯ ಅವಸ್ಥೆ.

'ಕೂಡು' ಈ ಧಾತುವಿನಿಂದ 'ಕೂಟ'ವೆಂಬ ನಾಮಪದವಾಗಿರುತ್ತದೆ. ಇದು ಅಪ್ಪು ಎಂಬ ಶಬ್ದದಿಂದ ಆಗುವ ಅರ್ಥದಲ್ಲಿ ಒಂದು : ಕಿಟೆಲ್ ಮಹಾಶಯನು ಅಪ್ಪು ಈ ಶಬ್ದಕ್ಕೆ ಅರ್ಥವನ್ನು ಬರೆಯುತ್ತ to join, to unite with: ಇದರದೇ ಇನ್ನೊಂದು ಅರ್ಥವನ್ನು ಕಿಟಲ್ ಮಹಾ ಶಯನು ಮಾಡಿದ್ದು : ಅಪ್ಪು ಎಂದರೆ admitting, to agree or assent to embrace. ಆದುದರಿಂದ ಶರಣಾಗತಿ ಎಂಬ ಭಾವವು ಅಪ್ಪು

ಎಂಬುವದರಿಂದುದ್ಭವಿಸುವುದು. ಒಂದು ಮತವನ್ನು ಅಪ್ಪಿದನು ಎಂದು ಹೇಳಿದಾಗ ಒಂದು ಪ್ರಣಾಲಿಯನ್ನು ಒಪ್ಪಿಕೊಂಡನು, ಅದನ್ನು ಆಶ್ರಯಿಸಿದನು ಅದಕ್ಕೆ ಶರಣು ಹೋದನು ಎಂಬ ಸ್ವಯಂಸ್ಫೂರ್ತಿಕ್ರಿಯೆ ನಡೆದುದನ್ನು ಸೂಚಿಸುತ್ತದೆ. ಇದರ ಮೇಲಿಂದ ಮಹದೇವಿಯಕ್ಕನು ಹೇಳುವ "ನಿನ್ನನಪ್ಪಿದಲ್ಲದೆ ಸೈರಿಸಲಾರೆ" ಎಂಬ ಪದದರ್ಥಗಳಾಗುತ್ತವೆ, 'ಸೈರಿಸಲಾರೆ' ಎಂಬುದರಲ್ಲಿ ಒಪ್ಪಿದ ಹಾಗೂ ಆಶ್ರಯಿಸಬೇಕೆಂಬ ಲವಲವಿಕೆಗಳು ಕೊಟವನ್ನು ಎತ್ತಿ ತೋರಿಸುತ್ತವೆ.

'ಕೂಡು ಎಂಬರ್ಥವನ್ನು ಕೊಡುವ ಇದು ಯೋಗ ಪರಿಭಾಷೆಯಲ್ಲಿ ಬಹು ಮಹತ್ವದ ಅರ್ಥವನ್ನು ಕೊಡುತ್ತದೆ. ಇದಕ್ಕೆ ಸರಿಸಮನಾದ ಸಂಸ್ಕೃತ ಪದವು 'ಯೋಗ'ವೆಂಬುದು 'ಯುಜ್' ಎಂಬ ಧಾತುವಿನಿಂದಾದುದು. 'ಕೂಟ' ವೆಂಬ ನಾಮಪದವನ್ನು 'ಯೋಗ'ವೆಂಬರ್ಥದಲ್ಲಿ ವಚನಕಾರರು ಬಳಸಿದ್ದಾರೆ. 'ಮಾಟಕೂಟ'ವೆಂದರೆ 'ಕರ್ಮಯೋಗ'ವೆಂದೂ ವಚನಸಾಹಿತ್ಯದಲ್ಲಿ ನೋಡಲು ಸಿಗುತ್ತದೆ. ಇದು 'ಕೂಡು' ಈ ಧಾತುವಿನಿಂದ ಜನಿಸಿದ 'ಕೂಟ'ವನ್ನು 'ಮಾಡು' ಈ ಧಾತುವಿನಿಂದ ಜನಿಸಿದ 'ಮಾಟ'ವೆಂಬ ಪದಕ್ಕೆ ಉತ್ತರದಲ್ಲಿ ಸೇರಿಕೊಂಡು ಸಂಭವಿಸಿದ 'ಸಮಸ್ತಪದ'ವಾಗಿರುತ್ತದೆ. 'ಅಪ್ಪು'ವಿನಿಂದುದ್ಭವಿಸಿದ 'ಶರಣಾಗು' ಎಂಬುದು ಅತಿ ಮಹತ್ವದ 'ಧಾರ್ಮಿಕ' ಪದವಾಗಿದೆ. ಮೊದಲನೆಯದು ತಾತ್ವಿಕ ಪದವಾಗಿರುವಂತೆ 'ಶರಣು' ಎಂಬುವ ಪದವನ್ನು ಜನಪ್ರಿಯಗೊಳಿಸಿದ ಧರ್ಮ ಬೌದ್ಧಧರ್ಮವಾಗಿರುತ್ತದೆ. ಇದು ಪ್ರಾತ್ಯರಿಂದ ಸ್ಥಾಪಿತವಾದ ಧರ್ಮವು. ಇವರಿಗಿಂತಲೂ ಪೂರ್ವದವರು ಕೂಡ ಈ ಪದವನ್ನು ಬಳಸದೆ ಇಲ್ಲ. ಈ ಪದವನ್ನು ಬಳಸಿದ ಉಪನಿಷತ್ತು ಶೈವವೆಂದು ಹೇಳಲಾಗುವ ಶ್ವೇತಾಶ್ವತರೋಪನಿಷತ್ತು. ಅಲ್ಲಿ ಅದಕ್ಕೆ ತಾತ್ವಿಕ ಅರ್ಥವಿರುತ್ತದೆ. ಬುದ್ಧಂ ಶರಣು ಗಚ್ಛಾಮಿ. ಸಂಗಂ ಶರಣಂ ಗಚ್ಛಾಮಿ. ಧಮ್ಮಂ ಶರಣಂ ಗಚ್ಛಾಮಿ ಎಂದು ಲೋಕಪ್ರಿಯವಾದ ಬೌದ್ಧಮತದ ಈ ತ್ರಯಿಯ ಪ್ರಭಾವದಿಂದ 'ಶರಣು' ಎಂಬುದನ್ನು ವೀರಶೈವರು ಬೌದ್ಧರಿಂದ ಎರವಲವಾಗಿ ಪಡೆಯಲಾಗಿದೆಯೆಂದು ಯಾರಾದರೂ ಭಾವಿಸುವುದು ಸಹಜ. ಆದರೆ ಅದರ ಮೂಲ ಮೂಲತಃ ಶೈವವಾಗಿದ್ದು ಆ ಉಪನಿಷದಿನ ಅರ್ಥದಲ್ಲಿಯೇ

ಇಲ್ಲಿ ಕೂಡ ಅಂಗರೆ ಷಟ್‌ಸ್ಥಲ ಸಿದ್ಧಾಂತದಲ್ಲಿ ಬಳಸಲಾಗಿರುವುದರಿಂದ ಅದು ಯತಾರ್ಥವಾದ ವಿಚಾರವಾಗಲಾರದು.

'ಶರಣು' ಎಂಬ ಪದದಲ್ಲಿ, ಮತಮನೋವಿಜ್ಞಾನದ ದೃಷ್ಟಿಯಿಂದ ನೋಡಿದಡೆ, ಸರ್ವಾರ್ಪಣವೆಂಬ ಅರ್ಥವಿರುತ್ತದೆ. 'ಸರ್ವಧರ್ಮಾನ್‌ಪರಿತ್ಯಜ್ಯ ಮಾಮೇಕ ಶರಣವ್ರಜ' ಎಂದು ಗೀತೆಯು* ಹೇಳುವಲ್ಲಿ ಈ ಅರ್ಥ ಬಹು ಸ್ಫುಟವಾಗಿ ವ್ಯಕ್ತವಾಗುತ್ತದೆ. 'ಸರ್ವಾರ್ಪಣ'ವು ಮನವನ್ನು ಬರಿದಾಗಿಸುವ ಇನ್ನೊಂದು ವಿಧಾನವಾಗಿದೆ. ವೀರಶೈವ ದರ್ಶನದಲ್ಲಿ ಬರುವ 'ಲಿಂಗ ಮುಂತಾಗಿ ಮಾಡುವುದು' ಎಂಬ ಪದದ ಅರ್ಥವು ಇನ್ನೂ ವಿಶಾಲವಾಗಿದ್ದು 'ಶರಣು' ಪದಕ್ಕೆ ಹೊಸ ಮೌಲ್ಯವನ್ನುಂಟುಮಾಡಿದೆ. ಇದೂ ಆಳವಾದ ವಿಶ್ಲೇಷಣೆಯಿಂದ ಸಿದ್ಧವಾಗುತ್ತದೆ. ಇದರ ಅಂದರೆ ಮೇಲಿನ ವಿವರಣೆಗೆ ಸಂಬಂಧಿಸಿದ ವಿಷಯದಲ್ಲಿ—'ಸರ್ವಾರ್ಪಣ' ಹಾಗೂ 'ಲಿಂಗ ಮುಂತಾಗಿ' ಕ್ರಿನಡೆಸುವುದು. ಮೊದಲನೆಯದು ಮನದ ಅವಸ್ಥೆಯಾಗಿದೆ; ಎರಡನೆಯದು ಘನದ ಅವಸ್ಥೆಯಾಗಿದೆ ಅಥವ ಘನಮನದ ಅವಸ್ಥೆಯಾಗಿದೆ. ಯಾಕಂದರೆ ಘನವು ಮನವನೊಳಕೊಂಡಿದೆ ಇಲ್ಲಿ. ಮನವು ಮನವಾಗಿ ಉಳಿದಿಲ್ಲ. ಮನವಿಲ್ಲ ಶಿವಯೋಗಿಗೆ. ಇಲ್ಲದ ಮನವನುಂಟೆಂದು ಗ್ರಹಿಸಿ ಅದನ್ನು ಬರಿದಾಗಿಸುವ ಕಾರ್ಯಮಾಡುವ ಪ್ರಮೇಯವೇ ಇಲ್ಲವೆಂದು ಪ್ರಭುದೇವರು ಹೇಳಿದ್ದಾರೆ.[13] ಆದಕಾರಣ ಅನಾದಿ ಶರಣ, ಆದಿಲಿಂಗವೆಂದು ವಚನಕಾರರು ಉಗ್ಗಡಿಸುವುದು. 'ಸಾದಾಖ್ಯದೇಹ'ವಲ್ಲದ ವಸ್ತು 'ಅನಾದಿ' 'ಸಾದಾಖ್ಯದೇಹಜನ್ಯ' 'ಆದಿ'. 'ಅರ್ಪಣ' ಶಬ್ದಕ್ಕೆ ಷಟ್‌ಸ್ಥಲ ಶಾಸ್ತ್ರದಲ್ಲಿ ವಿಶಿಷ್ಟವಾದ ಒಂದು ಅರ್ಥ ವಿರುತ್ತದೆ. 'ಅರ್ಪಣ'ಬುಬುದರರ್ಥ : throwing, 2 inserting, fixing 3 placing in or upon, 4 offering, delivering.

---

* ಗೀತೆಯು ಒಂದು ಮತೀಯ ಗ್ರಂಥವೆಂದು ಪ್ರಚಾರಮಾಡಿದ್ದಾರೆ. ಆದರೆ ಅದರ ಸಾಧುತ್ವವು ಪ್ರಶ್ನಾರ್ಹವಾಗಿರುವುದೆಂಬುದು ಪಂಡಿತರಿಗೆ ವೇದ್ಯ. ಉಪನಿಷತುಗಳನಾಗಲೀ, ಬ್ರಹ್ಮಸೂತ್ರಗಳನಾಗಲೀ, ಗೀತೆಯನ್ನಾಗಲಿ ಆ ರೀತಿಯಾಗಿ ಭಾರತೀಯ ಪರಂಪರೆ ಗ್ರಹಿಸಿಲ್ಲ. ಗೀತೆ ಪ್ರಸ್ಥಾನತ್ರಯಗಳಲ್ಲೊಂದಾಗಿರುವುದು ಸ್ವವಿವರಣಾತ್ಮಕ ಇದು. ಮತದ ಕಟ್ಟುಪಾಡಿಗೊಳಗಾಗದ್ದು ಎಂಬರ್ಥ ಇಲ್ಲಿ ಸ್ಫುಟವಾಗಿದೆ.

consigning. 5 giving back ಅರ್ಪಣದಲ್ಲಿ ಎರಡು ತತ್ವಗಳು ಇಲ್ಲವೆ ವಸ್ತುಗಳಿರುತ್ತವೆ. ಒಂದು 'ದೇವ' ಇನ್ನೊಂದು 'ಭಕ್ತ'. ದೇವನೆಂದರೆ ಉನ್ನತ ತತ್ವ Higher category, ಭಕ್ತನೆಂದರೆ ಅವನತ ತತ್ವ (lower category). ಇದು ಷಟ್‌ಸ್ಥಲ ಸಿದ್ಧಾಂತದಲ್ಲಿ ಅಗ್ರಾಹ್ಯಗ್ರಹಿಕೆ. ಗೀತೆಯಲ್ಲಿ ಇದು ಗ್ರಹಿಕೆ. ಯಾಕಂದರೆ ಷಟಸ್ಥಲ ಸಿದ್ಧಾಂತತದ ವಿಚಾರ ಪ್ರಣಾಲಿಯಲ್ಲಿ ಭಕ್ತನೆಂದರೆ ಅವನ ಇನೋಂದು ಸ್ವರೂಪ, ಭಕ್ತ ಹಾಗೂ ಅವರಲ್ಲಿ 'ಉನ್ನತ' ಹಾಗೂ 'ಅವನತ'ಗಳಿಗೆ ಅವಕಾಶವೇ ಇರುದಿಲ್ಲವಾದ್ದರಿಂದ ಅರ್ಪಣ ವೆಂಬುದು 'ಲಿಂಗಭೋಗೋಪಭೋಗ'ವೇ ವಿನಃ ಇನ್ನೇನೂ ಅಲ್ಲ. ಇದು ಆತ್ಮವು ಆತ್ಮವೇ ತಾನೆಂದರಿದು ಇರುವದೇ ಲಿಂಗಭೋದೋಪಭೋಗ, ಸಾಮರಸ್ಯ, ಅರ್ಪಣ ಹಾಗೂ ಅರ್ಚನ. ಆದ್ದರಿಂದ 'ಸರ್ವಾರ್ಪಣ'ವೆಂದು ಮನೋಮತ ಪ್ರಣಾಲಿಯಿಂದಿದು ಬಿನ್ನವಾದುದಾಗಿದೆ. ಮಹದೇವಿಯಕ್ಕನು ಬಳಸಿದ ಅಪ್ಪು-ಅರ್ಪು-ಅರ್ಪಿಸು ಈ ಅರ್ಥದಲ್ಲಿ ಭಿನ್ನವಾಗಿರುವದು ಸ್ಪಷ್ಟ ವಿದೆ.

**ಪೂಜೆ :**

'ಅಪ್ಪು' ಎಂಬ ಪದವು ಎರಡು ಭಾವಗಳಿಗೆ ಅವಕಾಶವನ್ನೊದಗಿಸು ವದು ಮೇಲಿನ ವಿವರಣೆಯಿಂದ ಸಿದ್ಧವಾಗುತ್ತದೆ. ಅವಾವವೆಂದರೆ—ಒಂದು ಶರಣಾಗತಿ, ಇನ್ನೊಂದು ಸಾಮರಸ್ಯ. ಆಶ್ರಯಿಸು ಎಂಬ ಭಾವವು ಶರಣಾ ಗತಿಯಲ್ಲಿರುವಾಗ ಆ ಭಾವ ಪೋಷಕವಾಗಿ ಅದನ್ನುದ್ದೀಪನಗೊಳಿಸುವಂಥದು ಎಂದು ಇರಲು ಸಾಕು. ಉದ್ದೀಪನಗೊಂಡುದು ಉದ್ದೀಪನಗೊಳಿಸಿದುದರಲ್ಲಿ ಲೀನವಾಗುತ್ತದೆ ಈ ದರ್ಶನದ ಪ್ರಕಾರ. ಆದುದರಿಂದ 'ಆಶ್ರಯ' ಮತ್ತು 'ಆಶ್ರಯಿ'ಗಳು ಅಭಿನ್ನವೆಂದು ಇದರ ಸಿದ್ಧಾಂತ. ಈ ಅವಸ್ಥೆಯಲ್ಲಿ 'ಸಮಧಾತು ಸಿದ್ಧಿ'ಯಾಗಲು' 'ಮನಸ್ಥಲ' ತತ್ವದಾಚೆಯ ತತ್ವವಾ 'ವಸ್ತು' ಸಿದ್ಧಿ ಆಗುವುದು. ನೋಡುವ ಹಾಗೂ ನೋಡಿಸಿಕೊಳ್ಳುವ ವಿಧಾನವು ಇಲ್ಲ ವಾಗಿ ಆತ್ಮವು ಆತ್ಮವನು ಪೂಜಿಸುವ ಕ್ರಿಯೆ ಪ್ರಾರಂಭವಾಗುವುದು. ಇದು 'ನಿವೃತ್ತಿ ಪರತೆ' ಅಥವಾ' ಲಿಂಗಾಂಗ' ಸಾಮರಸ್ಯ. ಇದು ವಸ್ತ್ವಾಂತರ ಅತಿ ಕ್ರಮಣತೆಯಾಗಿರುತ್ತದೆ. ಈ ರೀತಿಯ ಪೂಜೆಗೆ 'ಅಹಂಗ್ರೋಪಾಸನೆ' ಎಂದು

ಹೆಸರು. 'ಅಪ್ಪ' ಎಂಬ ಪದದಿಂದ ಉಪರಿಯಾದ ವಿಧಾನ ಹಾಗೂ ಅನುಭಾವ ತಂತ್ರದ ಲಕ್ಷಣ 'ಪೂಜೆ'.

ಪೂಜೆಯಲ್ಲಿ ಎರಡು ತೆರ : ೧) ಸಾಕಾರ ಪೂಜೆ, ೨) ನಿರಾಕಾರ ಪೂಜೆ. ಸಾಕಾರ ಪೂಜೆ ಹಾಗೂ ನಿರಾಕಾರ ಪೂಜೆಗಳೆರಡೂ ಅನುಭಾವಿಗಳ ಜೀವನದಲ್ಲಿ ಕಾಣುವವು. ಇದು ಅವರ ಜೀವನದಲ್ಲಿ ಅತ್ಯಂತ ಎದ್ದು ಕಾಣುವ ವಿಷಯವು. ಪೂಜೆಯಿಲ್ಲದ ಅನುಭಾವಿ ದೊರೆಯುವದಸಾಧ್ಯವೆಂದರೆ ತಪ್ಪಾಗಲಿಕ್ಕಿಲ್ಲ. ಪೂಜೆ ಒಂದೇ ತೆರನಾಗಿರಬೇಕೆಂದೇನಲ್ಲ. ಅದು ನಿಸರ್ಗದ ಉಪಾಸನೆಯಾಗಿರಬಹುದು. ದೇವತೆಗಳ ಉಪಾಸನೆಯಾಗಿರಬಹುದು. ಗುರುಗಳ ಉಪಾಸನೆಯಾಗಿರಬಹುದು. ಹೀಗೆ ಉಪಾಸನಾವಿಷಯ ವೈವಿಧ್ಯವಿರಬಹುದೇ ವಿನಃ ಉಪಾಸನೆಯಿರದಿರುವುದು ಸಾಧ್ಯವಿಲ್ಲವೆಂಬ ಮಾತನ್ನು ಮನಗಾಣಬೇಕು.

ಉಪಾಸನಾ ವಸ್ತುವು ಹಾಗೂ ಅನುಭಾವಿಯ ಸಂಬಂಧವು ಈ ಆರಾಧನೆಯಲ್ಲಿಯೇ ಬರುವುದು, ಸತಿಪತಿಭಾವ, ಪ್ರೇಯಸಿ ಪ್ರಿಯತಮಭಾವ ಕರ್ತೃಭೃತ್ಯಭಾವ ಹೀಗೆ ಅನೇಕ ವಿಧವಾದ ಆರಾಧನಾ ಸಂಬಂಧವು ಅಲ್ಲಿ ಕಂಡುಬರುತ್ತದೆ.

"ಏರಿಲ್ಲದಘಾಯದಲ್ಲಿ ನೊಂದೆನವ್ವಾ".

"ಅರಿಷಿಣವನೆ ಮಿಂದು, ಹೊಂದೊಡಿಗೆಯನೆ ಉಟ್ಟು...ಎಂಬ ಮಾತಿನಲ್ಲಾಗಲಿ, "ಯಾರೂ ಇಲ್ಲದವಳೆಂದು ಆಳಿಗೊಳಲುಬೇಡಾ!" ಎಂಬ ಕಟಕಿ ಮಾತಿನಲ್ಲಾಗಲಿ 'ಒಪ್ಪಚ್ಚಿ ಅಗಲಿ ಕೂಡುವ ಸುಖವು ಲೇಸು ಕಂಡಯ್ಯಾ. ಎಂಬಲ್ಲಿಯಾಗಲೀ, "ನೀ ನೊಲಿದ ನರಕವೇ ಮುಕ್ತಿ, ನೀನೊಲಿಯದಿದ್ದ ಮುಕ್ತಿಯೆ ನರಕ"ವೆಂದು "ನೆನೆಯಿಸಿ ತರಗೆಲಿಯು ಗಿರಿಕೆನಲು..." ಕೊಳ್ಳುವಲ್ಲಿಯಾಗಲೀ ಆಯಾ ಸಂಬಂಧಗಳ ಹಾಗೂ ಅನುಭವಗಳ ಅರ್ಥವಾಗದಿರಲಾರದು. ಇಂಥ ಸಂಬಂಧದ ವೃದ್ಧಿ ಆರಾಧನೆಯಲ್ಲಿದೆ.

**ಆನಂದ :**

ಆರಾಧನೆಯ ಸಂಪದವೇ ಆನಂದ; ತಾದಾತ್ಮ್ಯ. ಈ ಅಂತಿಮ ಫಲ

ಶ್ರುತಿಯು ವಿಶೇಷವಾದ ಬೆಳವಣಿಗೆಯಾಗಿದೆ. ಆನಂದವೇ ತಾನಾಗುವುದು ಪರತರ ತತ್ವಸಂಪದ, ಉಪನಿಷತ್ತು ಕೂಡ ಆನಂದೋ ಬ್ರಹ್ಮೇತಿ ವ್ಯಜಾನಾತ್ ಆನಂದಾಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೆ, ಆನಂದೇನ ಜಾತಾನಿ ಜೀವಂತಿ ಎಂದು ಜೀವನೋತ್ಪತ್ತಿ ಹಾಗೂ ಅಂತ್ಯಗಳನ್ನು ಕುರಿತು ಉಗ್ಗಡಿಸುತ್ತದೆ. ಮನೋಮಯಿ ಕವಿಯು ಕೂಡ ಆನಂದವನ್ನೇ ಸ್ಥಾಯಿ ಭಾವವಾಗಿರಿಸಿಕೊಂಡರೂ ಸಹಿತ ಅನುಭಾವಿಯು ಹೇಳುವ ಆನಂದದಿಂದ ಭಿನ್ನ. ಆತನದು ಅಂದರೆ ಅನುಭಾವಿಯದು ಘನಮನ ಅಂದರೆ ಸತ್ಯಹೊರ ಹೊಮ್ಮಿಸಿ ಋತವನ್ನು ಅಭಿವ್ಯಕ್ತಗೊಳಿಸುವುದು. ಹೊಸ ಹುಟ್ಟಿಗೆ ಕಾರಣ ತತ್ವರೂಪದ ಸತ್ಯಾವಸ್ಥೆಯಲ್ಲಿ ನವ್ಯತೆಯನ್ನುಂಟು ಮಾಡುವ ವಿಮರ್ಶೆ ಆಗಿರುತ್ತದೆ. ಇದು ಈ ಎರಡು ಆನಂದ, ಅಭಿವ್ಯಕ್ತಿ ಹಾಗೂ ಕಾರ್ಯಗಳಲ್ಲಿ ರುವ ಅಂತರವಾಗಿದೆ.

ಈ 'ಆನಂದ'ವು ಸುಖ ಹಾಗೂ ದುಃಖಗಳಿಂದ ಅತೀತವಾಗಿದೆ. ಸುಖ ದುಃಖಗಳು ಮನೋಸ್ಥಲವಸ್ಥೆಗಳು. 'ಆನಂದವು' ಆತ್ಮಸ್ಥಲದ ಲಕ್ಷಣವು. ಈ ಆನಂದವಾಗುವಲ್ಲಿ ಜೀವನವು ನಿರತವಾಗಿದ್ದು ನಿತ್ಯ ಸೃಷ್ಟಿ ಸಂಹಾರಗಳು ಪ್ರಕೃತಿಯಲ್ಲಿ ಪುರುಷ ಸ್ವಭಾವ ವ್ಯಕ್ತಿಗಾಗಿ ನಡೆದಿರುತ್ತವೆ. ಇದರ ಅತ್ಯುತ್ಕೃಷ್ಟವಾದ ಅಭಿವ್ಯಕ್ತಿಯು ಅನುಭಾವಿಗಳ ಜೀವನವಾಗಿದೆ. ಆದುದರಿಂದ ಈ ಜೀವನ ಕಂಡ ಮನಸಂಭೂತರಾದ ಮಾನವರು ವಿಸ್ಮಯ ಗೊಂಡು ಆ ಜೀವನವನ್ನು ಪೂಜಿಸುತ್ತಾರೆ, ಅದರ ಅನುಕರಣೆಯಲ್ಲಿ ನಿರತ ರಾಗಲು ಆ ಜೀವನ ಮೂರ್ತಸ್ವರೂಪದ ಸಾನ್ನಿಧ್ಯವನ್ನು ಅತ್ಯಂತ ಉತ್ಕಟತೆ ಯಿಂದ ಬಯಸುತ್ತಾರೆ. ಆ ಆನಂದಕ್ಕಾಗಿ ಅನೇಕ ಪರಮತ್ಯಾಗಗಳು, ಸಂಘಟನೆಗಳು, ಶಾಸನಗಳು ಸ್ವಯಂಸ್ಫೂರ್ತಿಯಿಂದ ಸಂಭವಿಸಿರುವುದನ್ನು ನಾವು ನೋಡುತ್ತೇವೆ. ಇದು ಆದರ್ಶವಾಗಿ ಕಾಣಲ್ಪಟ್ಟಿದೆ. ಭಗವದ್ಗೀತೆಯು ಈ ಮಾತನ್ನು 'ವಿಭೂತಿ ದರ್ಶನ ಯೋಗ'ವೆಂಬುದರಲ್ಲಿ ಹೇಳಿದೆ. ಇದೆಲ್ಲ ಆನಂದದ ಕಾರ್ಯ. ಇದು ಪರುಷವಾಗಿದ್ದು ಜೀವನವನ್ನು ಕೂಡ ಪರುಷ ವಾಗಿ ಪರಿವರ್ತನಗೊಳಿಸುವುದು. ಇದು ಅನುಭಾವೀ ಜೀವನದ ಕೊನೆಯ ಲಕ್ಷಣವಾಗಿರುತ್ತದೆ ವಚನಶಾಸ್ತ್ರದ ಪ್ರಕಾರ.

ಆನಂದವು ವೈಯಕ್ತಿಕವಾಗಿರುವಂತೆ ಸಾಮಾಜಿಕವೂ ಆಗಿರುತ್ತದೆ. ಆದುದರಿಂದ ಅದರ ಸಂಪಾದನಾ ರೂಪಗಳು ಅನೇಕ ರೀತಿಯಲ್ಲಿ ಸಾಮಾಜಿಕವೂ ಆಗಿರುತ್ತವೆ. ಇದು 'ಅನುಭಾವ' ಜೀವನದ ಕೋವಲತೆಯ ಸ್ವರೂಪಕ್ಕೆ ಹೊಸ ತಿರುವನ್ನು ಕೊಟ್ಟಿದೆ. ಈ ಹೊಸ ತಿರುದಿನಿಂದ 'ಲೋಕ ಸಂಗ್ರಹ ಕಾರ್ಯ'ವೆಂದು ಸುಪ್ರಸಿದ್ಧವಾದ ಇದು ನಿತ್ಯವೂ ನಡೆದಿರುತ್ತದೆ. ಬಸವಣ್ಣನವರು 'ಇವನಾರವ ಇವನಾರವ ನೆನ್ನದಿರಯ್ಯ' ಎಂದು ಹೇಳುವಲ್ಲಿಯೂ 'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟದಯ್ಯಾ' ಎಂದು ಹಾಡುವಲ್ಲಿಯೂ ಈ ಉದ್ದೇಶ ಅಭಿವ್ಯಕ್ತವಾಗಿರುತ್ತದೆ. ಈ ಮುಖದ ವಿವರಣೆಯೂ 'ವೈಯಕ್ತಿಕ ಜೀವನ'ದ ಅನುಭವದಷ್ಟೇ ಮಹತ್ತರವಾದುದೂ ವಿಶ್ವವ್ಯಾಪಕವಾದ ಪರಿಣಾಮ ಬೀರುವಂಥದೂ ಹಾಗೂ ಆತ್ಮಲಕ್ಷಣಕ್ಕೆ ಅನುಗುಣವಾಗಿರುವಂಥದೂ ಆಗಿರುವದೆಂಬ ಮಾತಿನಿಂದ ಸಿದ್ಧವಾಗುತ್ತದೆ.

ವೈಯಕ್ತಿಕ ಅನುಭಾವ (Personal mysticism)ದ ಕೆಲವು ಸುಂದರ ಅನುಭವಗಳ ವೈವಿಧ್ಯತೆಯನ್ನು ನಾವಿಲ್ಲಿ ನೋಡಬಹುದು :

ಅರಿಷಣವನೆ ಮಿಂದು ಹೊಂದೊಡಿಗೆಯನೆ ತೊಟ್ಟು
ದೇವಾಂಗವನುಟ್ಟೆನಲೆ ಪುರುಷಬಾರಾ, ಪುರುಷರತ್ನವೆ ಬಾರಾ!
ನಿನ್ನ ಬರವೆನ್ನ ಅಸುವಿನ ಬರವಾದುದೀಗ
ಬಾರಯ್ಯಾ ಚೆನ್ನಮಲ್ಲಿಕಾರ್ಜುನಯ್ಯಾ,
ನೀನು ಬಂದಹನೆಂದು ಬಟ್ಟೆಯ ನೋಡಿ ಬಾಯಾರುತಿರ್ದೆನು!! 14
ಉದಯದಲೆದ್ದು ನಿಮ್ಮ ನೆನೆವೆನಯ್ಯಾ,
ಕಸದೆಗೆದು ಚಳೆಯಕೊಟ್ಟು, ನಿಮ್ಮ ಬರವ ಹಾರುತಿರ್ದೆನಯ್ಯಾ!
ಹಸೆ ಹಂದರವನಿಕ್ಕಿ ನಿಮ್ಮಡಿಗಳಿಗೆಡೆಮಾಡಿಕೊಂಡಿರ್ದೆನಯ್ಯಾ!
ಚೆನ್ನಮಲ್ಲಿಕಾರ್ಜುನಯ್ಯಾ, ನೀನಾವಾಗ ಬಂದೆಯಾ ಎನ್ನ ದೇವಾ!! 15

ಇಂಥ ಭಾವನೆಗಳು ಅಕ್ಕನ ಅನುರಾಗಮಯ ಜೀವನವನ್ನು ಮನೋಹರ

ವಾಗಿ ಚಿತ್ರಿಸುತ್ತವೆ.§ 'ಕಾಯದ ಕಳವಳಕ್ಕಾಗಿ ಕಾಯಯ್ಯ ಎನ್ನದೆ, ಜೀವನೋಪಾಯಕ್ಕಾಗಿ ಈಯಯ್ಯ ಎನ್ನದೆ ಭಕ್ತಿಯ ಭರದಲ್ಲಿ ವಿರಹದ ವಿವ್ಹಲತೆಯಲ್ಲಿ ಮೊಗಬಾಡಿ ಮುಡಿಬಿಟ್ಟು ಬಲುಹಳಿದು ದಿಕ್ಕುಗಾಣದವಳಾಗಿ.[16]

> ಅರಸಿತೋಽಲಿದಡಿಲ್ಲ; ಹರಸಿ ಬಳಲಿದಡಿಲ್ಲ; ಬಯಸಿ ಹೊಕ್ಕಡಿಲ್ಲ.
> ತಪಸ್ಸು ಮಾಡಿದರಿಲ್ಲ; ಅದು ತಾನಹ ಕಾಲಕ್ಕದೆ ಸಾಧ್ಯವಾಗದು
> ಶಿವನೊಲಿವಲ್ಲದೆ ಕೈಗೂಡದು ...."

ಎಂದು ಅಂತರಂಗದಲ್ಲಿ ನೊಂದು ಬೆಂದು ತನ್ನನ್ನು ತಾನೇ ಸಾಂತ್ವನಗೊಳಿಸಿಕೊಳ್ಳಲುದ್ಯುಕ್ತಳಾಗುತ್ತಾಳೆ. ಗಿಡವು ಕಾಲದಲಲ್ಲದೆ ಪತ್ರ, ಪುಷ್ಪ, ಫಲಗಳನ್ನು ಬಿಡದಂತೆ ತನ್ನ ಪರಿಪಕ್ವಕಾಲದಲ್ಲಿ ಚೆಲುವ ಚನ್ನಿಗ ಚೆನ್ನಮಲ್ಲಿಕಾರ್ಜುನ ಬಂದೇ ಬರುವನೆಂಬ ವಿಶ್ವಾಸದ ಕೆಚ್ಚು ಅಚ್ಚುಮೆಚ್ಚು ಹುಟ್ಟಿಸುವಂಥದಾಗಿದೆ.

---

§ "Mystical religious experience derives its zest from the manifold instincts and impulses of man. While mysticism is rooted in the various fundamental impulses, it not only borrows its symbols and imageries from the intimacies of human love and aspirations, it also seeks its co-ordination from the various loyalaties in domestic and social life "

"Furthermore, there have developed among many peoples forms of emotional mysticism in which not merely sex but also other normal impulses play a religious role, and sex becomes so metamorphosed by sublimation that the only thing by which it can be recognised is a voluptuousness deeply enjoyable and satisfying.

Radhakamal Mukerjee, The Theory and Art of Mysticism, Asia Publishing House Bombay (1960), p. 143.

ಇದು ಸಹಜವಾದ ಭಾವಜೀವದ ಸೊಬಗು. ಇದಲ್ಲದೆ ಅತಿ ಮಹತ್ವದ ಆಧ್ಯಾತ್ಮಿಕ ವಿಚಾರಗಳನ್ನು ಮಹದೇವಿಯಕ್ಕ ಹೊರಹೊಮ್ಮಿಸಿದ್ದಾಳೆ. ಇಂಥ ವಿಚಾರಗಳನ್ನು ಉಪನಿಷತ್‌ಗಳ ಕಾಲದ ದೃಷ್ಟಾರರೂ ಬುದ್ಧ, ಮಹಾವೀರ ರಂಥ ಆರ್ಯರೂ ಕಂಡು ಆಧ್ಯಾತ್ಮಿಕ ಪ್ರಪಂಚದ ಆಗುಗಳ ತತ್ವದವಿಚಾರ ಮಾಡಿದ್ದನ್ನಿಲ್ಲಿ ಸ್ಮರಿಸಿಕೊಂಡರೆ ಇಂಥ ವಿಚಾರಗಳು ಆಧ್ಯಾತ್ಮಿಕ ತತ್ವಗಳಾಗಿದ್ದೂ ಆ ಸತ್ಯತಮ ವಿಚಾರವಲಯದರ್ಶವಾದಾಗ ಅವುಗಳ ಸಂದರ್ಶನ ಸಂಭಾಷಣೆಗಳಾಗಲೇಬೇಕಾದವೂ ಮನೋಮಯ ಪ್ರಪಂಚದಲ್ಲಿ ಅವುಗಳ ಅನುಷ್ಠಾನ, ಅನುಕರಣಗಳ ಆಲೋಚನೆ, ಪ್ರೇರಣೆ ಅತ್ಯವಸ್ಯವೆಂದೂ ಬಹು ಸ್ಫುಟವಾಗಿ ವ್ಯಕ್ತವಾಗದಿರದು. 'ಅರಸುವುದೂ,' 'ಹರಸು'ವುದೂ ಹಾಗೂ 'ತಪ್ಪಸ್ಸು' ಮಾಡುವುದೂ ಮನಸ್ಥಲದ ಸ್ವಭಾವಗಳು. ಇವುಗಳಲ್ಲಿ ಅತಿ ಮನಸ್ಥಲದ ಸತ್ವಗಳು ಇಳಿದಾದ ಅವುಗಳು ಹೊಸ ಶಕ್ತಿಗಳಾಗಿ ಉದ್ಧರಣ ಸಾಮರ್ಥ್ಯವನ್ನು ಪಡೆದುಕೊಳ್ಳುವುದರಿಂದ ವ್ಯಕ್ತಿಜೀವನವಲ್ಲಿ ಹೊರಹೊಮ್ಮಿ ಸಮಾಜಜೀವನದಲ್ಲಿ ಒಂದು ಹೊಸ ಉತ್ಸಾಹ, ನಿಷ್ಠೆಗಳನ್ನೂ ವಿಚಾರಾಂದೋಲನವನ್ನು ಉಂಟುಮಾಡುತ್ತದೆ. ಇದರಿಂದ ವ್ಯಕ್ತಿಜೀವನದ ಪರಿಶುದ್ಧಿ ಪ್ರಭಾವಗಳು ಹೆಚ್ಚುವಂತೆ ಸಾಮಾಜಿಕ ಜೀವನದಲ್ಲಿ ನವ್ಯತೆಭವ ತೆಗಳು ಕಂಡು ಬಂದು ಅದರಲ್ಲಿ ಶಾಂತಿ, ರಚನಾತ್ಮಕ ಮನೋವೃತ್ತಿಗಳು ಅಭಿವೃದ್ಧಿಗೊಳ್ಳುವವು. ಇದು ಅಂಟುರೋಗಿನಂತೆ ಒಂದು ಸಮಾಜದಿಂದ ಇನ್ನೊಂದು ಸಮಾಜದಲ್ಲಿ ಹರಡಿ ಜಾತಿ ವಿಜಾತಿಗಳ ಮಧ್ಯ ನಿರ್ಮಿತಗೊಂಡು ಸಂಪ್ರದಾಯದ ಗೋಡೆಗಳು ಹಾಳಾಗಿ ಹೋಗುವವು. ರವೀಂದ್ರರ ಹೇಳುವಂತೆ "Where the mind is without fear the head is held high" ವಿಚಾರದಲ್ಲಿ ಮನವು ಎಚ್ಚರಗೊಂಡು ನಿರ್ಭಿತವಾಗಿ ಪರಿವರ್ತಿಸುವುದು.

ಇನ್ನೊಂದು ವಿಚಾರವೆಂದರೆ—ಈ ವಚನದಲ್ಲಿ ಬರುವ ಒಂದೆರಡು ಪದಗಳು ಅತ್ಯಂತ ವಿಚಾರ ಪೂರಿತವಿದ್ದು ಅವುಗಳು ವಿಚಾರಾರ್ಹವಾಗಿರುತ್ತವೆ. ಅವುಗಳಲ್ಲಿ 'ತಾನಹಕಾಲಕ್ಕಲ್ಲದೆ' ಎಂಬುದು ಒಂದು; 'ತಾನಹಕಾಲ'ವೆಂದರೆ ತಾನು 'ಆಗುವಕಾಲ'ವೆಂದು ಅರ್ಥೈಸಬಹುದು. ಅದೇ ರೀತಿ 'ತಾನು ಆಗುವ ಕಾಲಕ್ಕೆ' ಎಂದೂ ಅರ್ಥೈಸಬಹುದು. ಇವೆರಡೂ ಓದಲು ಒಂದೇ

ಎಂದು ಕಂಡು ಬಂದರೂ 'ವಸ್ತ್ವಾಂತರ' ಇಲ್ಲವೆ 'ಅರ್ಥಾಂತರ' ವಿರುವುದು. ಈ ಅಂತರವು ಭಿನ್ನಭಿನ್ನವಾದ ವಿಚಾರ ಪ್ರಣಾಲಿ, ಆಚಾರ ಪ್ರಣಾಲಿ, ಅದೇ ರೀತಿ ಅನುಭಾವ ಪ್ರಣಾಲಿಗಳ ಸೃಷ್ಟಿಗೆ ಅವಕಾಶವನ್ನು ಕೊಡುವುದು. 'ತಾನು' ಎಂದರೆ 'ಬ್ರಹ್ಮ' ಇಲ್ಲವೆ 'ವ್ಯಕ್ತಿ' ಎಂದು ಎರಡು ತೆರನಾಗಿ ಹೇಳಬಹುದು. ಆಗ ಅದರ ಆಧ್ಯಾತ್ಮಿಕ ಅರ್ಥಕ್ಕನುಸರಿಸಿ ಮುಕ್ತಿವಿಚಾರ, ಬ್ರಹ್ಮ ಹಾಗೂ ಭಕ್ತರ ವಿಚಾರಗಳೂ ಭಿನ್ನ ಭಿನ್ನವಾಗುವವು. ಇದು ಅನುಭಾವಶಾಸ್ತ್ರದ ಹಿರಿಮೆ ಗರಿಮೆಗಳನ್ನು ಎತ್ತಿತೋರಿಸುವುದು. ಬಳಕೆಯ ಚಿರಪರಿಚಿತವಾದ ಮತೀಯ ವಿಚಾರ ಆಚಾರಗಳಲ್ಲಿಯೇ ಆ ಅತೀತವಸ್ತುವನ್ನಿವರು ಆಚರಣೆಗೆ, ಅನು ಭಾವಕ್ಕೆ ತರುವರು. ಅನುಭಾವ ಪದ್ಧತಿಯ ವೈಶಿಷ್ಟ್ಯವಿದು. ಜಗತ್ತಿನ ಎಲ್ಲ ಅನುಭಾವಿಗಳೂ ಇದೇ ಮಾರ್ಗವನ್ನನುಸರಿಸಿ ಬ್ರಹ್ಮವನ್ನಾಚರಿಸಿದ್ದಾರೆ.

17 ಗಿರಿಯಲಲ್ಲದೆ ಹುಲ್ಲು ಮೆಳೆಯಲಾಡುವುದೆ ನವಿಲು ?  
ಕೊಳಕ್ಕಲ್ಲದೆ ಕಿರುವಳ್ಳಕ್ಕೆಳಸುವುದೆ ಹಂಸೆ ?  
ಮಾಮರ ತಳಿತಲ್ಲದೆ ಸ್ವರಗೈವುದೆ ಕೋಗಿಲೆ ?  
ಪರಿಮಳ ವಿಲ್ಲದ ಪುಷ್ಪಕ್ಕೆಳಸುವುದೆ ಭ್ರಮರ ?  
ಎನ್ನದೇವ ಚೆನ್ನಮಲ್ಲಿಕಾರ್ಜುನಂಗಲ್ಲದೆ ಅನ್ಯಕ್ಕೆಳಸುವುದೆ ಎನ್ನಮನ ?  
ಪೇಳಿರೆ ಕೆಳದಿಯರಿರಾ !

18 ತನುವನುವಾಯಿತ್ತು, ಮನವನುವಾಯಿತ್ತು, ಪ್ರಾಣವನುವಾಯಿತ್ತು.  
ಮುನಿದು ಬಾರದಪರಿ ಇನ್ನೆಂತು ಹೇಳಾ ?  
ಎನ್ನ ಪ್ರಾಣದಲ್ಲಿ ಸಂದು, ಎನ್ನ ಮನಕ್ಕೆ ಮನವಾಗಿ ನಿಂದ  
ಎನ್ನ ದೇವ ಚೆನ್ನಮಲ್ಲಿಕಾರ್ಜುನನ ಕಾಣದಡೆ  
ಆನೆಂತು ಬದುಕುವೆನವ್ವಾ !

ಮೇಲಿನ ವಚನಗಳಲ್ಲಿ ಮಹಾದೇವಿಯಕ್ಕನು ತನ್ನಂತರಂಗದ ಅನಿಸಿಕೆ ಗಳನ್ನು, ಜೀವನದ ಗುರಿಯನ್ನು, ತನ್ನ ಒಲವು ನಿಲವುಗಳು ಆ ಗುರಿಯಾಗಿ

ರುವುದನು ಹಾಡಿದ್ದಾಳೆ.† ಅವಳು ತನ್ನ ಜೀವನದ ಪರಮ ಆದರ್ಶದಲ್ಲಿ ಇಟ್ಟಿರುವ ನಿಷ್ಠೆ ಅಮೋಘವಾದುದು, ಆದರ್ಶಪ್ರಾಯವಾದುದು. ಆ ಆದರ್ಶದ ಬಯಕೆ ಅವಳ ಆತ್ಮಲಕ್ಷಣವಾಗಿದೆ. ಆದುದರಿಂದ ಅದು ಸಹಜ, ಸತ್ವಪೂರ್ಣ

---

†"All the impulses and interests aroused in the responses to human beings emerge singly or collectlively in the connection between the mystic and his God, and we have different emotional approaches to Him". Radhakamal Mukerjee, ibid-p. 147.

"It is in the intimacies of relationship with a personal divinity that persons satisfy instincts of self-assertion, sex, or paternal impulses, and develop a loyalty which professor Royce describes as a principle fit to be made the basis of universal moral code. The spirit of true loyalty is of its very essence a complete synthesis of the moral and of the religious interests. Now this loyalty springs from different relations between God and the mystic, such, for instance, as when the mystic regards himself as God's servant, as God's friend or comrade, as God's son, or, again, as God's elect bride: and therefore results in his different ethical attitudes towards society and the environment. And, indeed, this loyalty entails a gradual organisation of the emotions so that there is less psychic conflict, and man develops a permanent organised attitude which is most in keeping with his social behaviour. In this manner any danger that an emotional abandon may preclude social obligation is avoided. Radhakamal Mukerjee, ibid. p. 150.

ಅದನ್ನು ತನ್ನ ಕೆಳದಿಯರೆಡರಿಟ್ಟಿರುವ ರೀತಿ, ಅಲ್ಲಿ ಬಳಸಲಾದ ಪ್ರತಿಮೆಗಳು ತುಂಬಾ ವೈಚಿತ್ರ್ಯಪೂರ್ಣವಾಗಿವೆ.

ತನ್ನ ತನು, ಮನ,ಪ್ರಾಣಗಳು ಹೇಗೆ ಸಿದ್ಧಗೊಂಡಿವೆ, ಶುದ್ಧಗೊಂಡಿವೆ ಯೆಂಬುದು ಅವಳ ಮತ್ತೊಂದು ಮಾತಿನಲ್ಲಿ ಅಭಿವ್ಯಕ್ತಗೊಂಡಿದೆ. 'ಶುದ್ಧಿ' ಯೆಂಬುದು ಅನುಭಾವ ಜೀವನದ ಶ್ರೇಷ್ಠವಾದ ಇರುವು. 'ಶುದ್ಧಿ' ಹೊಂದು ವುದನ್ನು ಅವರು ಪುನರ್ಜನ್ಮವೆಂದು ಗ್ರಹಿಸುತ್ತಾರೆ. ಶುದ್ಧವಾದ ಮೇಲೆ ಅವರು ಅಶುದ್ಧವಾದ ಜೀವನವನ್ನು 'ಪೂರ್ವಾಶ್ರಯ'ವೆಂದು ಹೇಳುತ್ತಾರೆ. ಪೂರ್ವಾಶ್ರಯದ ನೆನಪನ್ನು ಕೂಡ ಎತ್ತಲಾರರು. ಆ 'ಶುದ್ಧಿ'ಯು ಎರಡು ತೆರನಾಗಿರುವುದೆಂದು ಶರಣರು ಹೇಳುತ್ತಾರೆ : ಅಂತರಂಗ ಶುದ್ಧಿ ಮತ್ತು ಬಹಿರಂಗಶುದ್ಧಿ. ತನುಶುದ್ಧಿ, ಮನಶುದ್ಧಿ ಹಾಗೂ ಪ್ರಾಣಶುದ್ಧಿ. ವೀರಶೈವ ಶಾಸ್ತ್ರದಲ್ಲಿ ತನುವಿನಿಂದ ಮನ, ಮನದಿಂದ ಪ್ರಾಣ ಒಂದರಿಂದೊಂದು ತತ್ವ ಗಳು ಹಿರಿದಾದಂಥವು. ಅವುಗಳ ಶುದ್ಧಿ ಬೇರೆ ಬೇರೆ ಮಾರ್ಗದಿಂದ ಸಾಧ್ಯ. ಈ ಶುದ್ಧಿಯನ್ನು ಸಾಧಿಸಿದ ಮೇಲೆಯೂ ಆತನು ಬರಲಾರದಿರನು. ಯಾಕಂ ಡರೆ 'ಶುದ್ಧಿ' ಎಂಬುದು 'ಶಿವನ' ಇರವು ನೆರೆವಲ್ಲಿ ಪರಮ ಸಾಧನ. ಅದರ ವಿನಃ ದೇವರ ಪ್ರತ್ಯಕ್ಷತೆ ಅಸಾಧ್ಯವೆಂದು ಎಲ್ಲ ಅನುಭಾವಿಗಳು, ಪ್ರವರ್ತಕರು ಹೇಳಿ, ಬದುಕಿದುದು ಸಾಕ್ಷಿ. ಆಗ ಶಿವನು ಅಲ್ಲಿ ಆಳಿನಾಳಾಗಿ ಬಂದಿರುವನೆಂಬ ಭರವಸೆ ಬೇರೆ ಕೊಡುವ ಅವಶ್ಯಕತೆ ಇರುವದಿಲ್ಲ. ಅವನು ತನುವಿನಲ್ಲಿ, ಮನ ದಲ್ಲಿ, ಪ್ರಾಣದಲ್ಲಿ ಇದ್ದು ಆತನನ್ನು ನೋಡದಿರುವುದು ಹೇಗೆ ಸಾಧ್ಯ ? ಆತ ನನ್ನು ನೋಡಿ ಕೂಡಿಹೆನೆಂಬುದೆ ಕೊರತೆ ಚಾಮರಸನ ಮಾತಿನಲ್ಲಿ ಹೇಳ ಬೇಕಾದರೆ : ಗಗನವನು ಮುಟ್ಟುವರೆ ನಿಗುರಿ ನಿಂದಿರಲೇಕೆ ?" ಎಂಬಂತೆ.

ರಾಗಯೋಗಿಣಿಯಾದವಳಲ್ಲಿ ಈ ದೃಢತೆ, ಬಲಿದಾನ, ಸತ್ಯಾಗ್ರಹಗಳು ಪ್ರಮುಖಗುಣಗಳು. ಪ್ರೇಮಕ್ಕೆ ಪ್ರತಿಯಾಗಿ ಪ್ರೇಮ ಹೊರಹೊಮ್ಮಿ ಉತ್ತರ ವಾಗಬೇಕು. ಇದು ಸಾಮಾನ್ಯ ಲಕ್ಷಣ, ಜಾಣತನದ ದ್ಯೋತಕ. ಇವೆರಡೂ ಕಂಡು ಬರುವವಿಲ್ಲಿ. ಪ್ರೇಮ ಉನ್ಮಾದವಾಗಿ ಯಜ್ಞರೂಪು ಗೊಂಡು ದಿವ್ಯಾಗ್ನಿಯಾಗಿ ಕ್ರತುಶಕ್ತಿಯಾಗಿ ಅಭಿವ್ಯಕ್ತಿಯಾಗಿದೆಯಿಲ್ಲಿ. ಜೀವ- ನದ ಅತ್ಯಂತ ಸುಮಧುರ,ಶಿವಮಯ ಅಭಿವ್ಯಕ್ತಿ ಪರಾವಾಕ್ ಇದು.ಸಾಧನೆಯ

ಶಿಖರಾರೋಹಣ ವಿಹಾರದಲ್ಲಿ ತಾನೂ ತಂಬೂರಿಯಾಗಿ, ಗೀತವಾಗಿ ಅನಂತ ವಿಧದಲ್ಲಿ ಸಮ್ಮೋಹನ ಗೀತ ಗುಂಜಾರವವನ್ನು ಹರಡಿದ್ದಾಳೆ ಮಂತ್ರಗಳಾಗಿ, ಆ ಲಹರಿಗಳೆಲ್ಲ ಒಂದೊಂದಾಗಿದ್ದು ತಮ್ಮ ಮೇಲೆ ಆದ ಬೆಡಗು ಬಿನ್ನಾಣಗಳನ್ನು ಬಿತ್ತರಿಸುತ್ತವೆ. ಅವುಗಳಿಗೆ ಮಾನವ, ದಾನವ, ತರುಲತೆ, ಗಿರಿಧರಿ, ಬೆಳಗು, ಬಾನುಗಳಂಥ ಸ್ವಜಾತಿ ವಿಜಾತಿ ವಿಶ್ವಜಾತಿಗಳ ಎಲ್ಲೆಯನ್ನು ಮೀರಿ ನಿಂದು ಎಲ್ಲವನೂ ಒಂದೇ ಬಂಧದ ಚಂದದಲ್ಲಿ ಆಲಿಂಗಿಸುವ ಮಹತ್ತ್ತತೆಯಿದೆ. ಆ ಉನ್ನತವಾದ ಆದರ್ಶ ಆಯಾ ಜಾತಿಗೆ ಸೇರಿದ್ದು. ಅಂದರೆ ಗುಣಗಳಿಗೆ ಸೇರಿದ್ದು. ಎಲ್ಲ ಆದರ್ಶಗಳು ಒಂದು ಮೂಲ ಆದರ್ಶ ಬೋಧಕವಾಗಿರುವ ಬೋಧೆಯನ್ನು ಮಹಾದೇವಿಯಕ್ಕ ತನ್ನ ಭಾವದ, ಅನುಭಾವದ ದೀಪ್ತಿಯಲ್ಲಿ ಬೆಳಗಿದ್ದಾಳೆ. ಹಂತುಹಂತಾಗಿ ಹೊರಹೊಮ್ಮುವ ಆ ಜೀವಜ್ಯೋತಿಯ ಕಿರಣಗಳು ನಮ್ಮಲ್ಲಿ ಅಡಗಿರುವ ದಿವ್ಯ ಕಿರಣಗಳನ್ನು ಪ್ರಕಾಶಿಸುತ್ತವೆ. ಅದರ ದಿವ್ಯ ಸ್ಪರ್ಶ ದೇದಿಪ್ಯತೆ ಹಾಗೆಮಾಡುವುದು. ಹಸಿರು, ನವಿಲೆ, ಅದರ ಲಾಸ್ಯ, ಕಿರಿವಳ್ಳವಲ್ಲದ ಕೊಳ, ಹಂಸೆಗೆ; ಮಾಮರ, ತಳಿರು ಕೋಗಿಲೆಯ ಸ್ವರಕ್ಕೆ ಇಂಥ ಸಾಮಾನ್ಯ ಪದಗಳು ಆ ಪ್ರೇಮಯೋಗಿಣಿಯ ಅಂತರಂಗದಲಿ ಮಿಂದು ಅಸಾಮಾನ್ಯವಾದ ಸಂಪದವನ್ನು ಹೊತ್ತುತಂದಿವೆ. ಶಬ್ದವು ಒಂದು ಸಾಧನ. ಅದನ್ನು ಬಳಸುವವರ ಯೋಗ್ಯತೆಯ ಪ್ರಕಾರ ಅದು ಸಮರ್ಥ ವಾಗುತ್ತದೆ, ಶಕ್ತಿಯಾಗುತ್ತದೆ. ಅದೊಂದು ನಾವೆ ದೈವಿಸಂಪದ ತರಲು.

೧೯ ವನದೊಳಗಣದೇವ ತರುವೆಲ್ಲ ನೀವೆ,
ತನುವಿನೊಳಗಾಡುವ ಖಗಮೃಗವೆಲ್ಲ ನೀವೆ ಚೆನ್ನಮಲ್ಲಿಕಾರ್ಜುನಾ! ."

ಅನುಭಾವಿಗೆ ಪ್ರಪಂಚದ ಪ್ರತಿಯೊಂದು ವಸ್ತುವೂ ತನ್ನಿನಿಯನಾದ ಮಲ್ಲಿಕಾರ್ಜುನನಾಗಿರುವಂತೆ ದೈವಿ ಪ್ರಪಂಚಕೆ ಸೇರಿದವುಗಳಾಗಿರುತ್ತವೆ. "Every bush is afire!" ಎಂದು ಆಂಗ್ಲ ಅನುಭಾವಿಯ ಮಾತು ಮಹದೇವಿಯಕ್ಕನ ವಿಚಾರವನ್ನೆ ನೆನಪಿಗೆ ತರುವದು. ಅದು ಪ್ರಪಂಚದ ಅನು ಭಾವಿಗಳು ಸರ್ವದರಲ್ಲಿಯೂ ಶಿವನನ್ನು ಕಂಡುದು ಮನೆಮಾತು. ಅದು ಅವರ ನಿತ್ಯದ ಇರವು. ಅವರ ಸಹಜ ದರ್ಶನವು ನಮಗೆ ಬೇರೆಯಾಗಿ ಕಾಣುವುದು.

ಅದಕ್ಕೆ ಅನುಭಾವಿಗಳು "ಶರಣರ ಚರಿತ್ರ ಲೋಕಕ್ಕೆ ಮರುಳಾಗಿ ತೋರು ವುದು" ಎಂದು ಒಂದೆಡೆಗೆ ಹೇಳಿದರೆ, "ಬಹು ಜನರು ಹುಚ್ಚರಿರೆ ಹುಚ್ಚನಲ್ಲದ ನರನೆ ಹುಚ್ಚಾಗಿ ತೋರುವನು" ಎಂದು ಬೇರೊಬ್ಬರು ತಿಳಿಸುತ್ತಾರೆ. ಮಹಾದೇವಿಯಕ್ಕ ತನ್ನ ಸುತ್ತಮುತ್ತಲೂ ದೈವೀ ಸಂಪದವನ್ನೆ ಕಾಣುತ್ತಾಳೆ. ಆ ಸಂಪದದ ಸೊಗಸಿನಲ್ಲಿ ಮೈಮರೆಯುತ್ತಾಳೆ, ಹಾಡಿ ನಲಿದಾಡುತ್ತಾಳೆ. ಆ ಆನಂದವನ್ನು ನಿನದಿಸುವ ಕೊಳಲಾಗಿದ್ದಾಳೆ, ವೀಣೆಯಾಗಿದ್ದಾಳೆ. ಆ ದಿವ್ಯೋನ್ಮಾದ ಸ್ವರ ಸಂಜೀವಿನಿಯಿಂದ ದೈವೀ ಜೀವನದಲ್ಲಿ ಮಾನವನ ಜೀವನವನ್ನು ಮೈಮರದೊರಗಿಸಹಚ್ಚಿ ಎಚ್ಚರಿಸುತ್ತಾಳೆ. ಇದು ಈ ಗಾನದ ಮೋಡಿ.†

> ೨೦ ಚಿಲಿಮಿಲಿಯೆಂದೋದುವ ಗಿಳಿಗಳಿರಾ ನೀವು ಕೇಳಿರೇ ನೀವು ಕೇಳಿರೇ !
> ಸರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕೇಳಿರೇ ನೀವು ಕೇಳಿರೇ !
> ಎರಗಿಬಂದಾಡುವ ತುಂಬಿಗಳಿರಾ ನೀವು ಕೇಳಿರೇ ನೀವು ಕೇಳಿರೇ !
> ಕೊಳನ ತಡಿಯೊಳಾಡುವ ಹಂಸೆಗಳಿರಾ ನೀವು ನೋಡಿರೇ ನೀವು ನೋಡಿರೇ !
> ಗಿರಿಗಹ್ವರದೊಳಗಾಡುವ ನವಿಲುಗಳಿರಾ ನೀವು ಕಾಣರೇ ನೀವು ಕಾಣರೇ !
> ಎನ್ನೊಡೆಯ ಚೆನ್ನಮಲ್ಲಿಕಾರ್ಜುನನೆಲ್ಲಿಹನೆಂಬುದನ್ನು ನೀವು ಹೇಳಿರೇ
> ನೀವು ಹೇಳಿರೇ !!

ನಿಸರ್ಗವೂ ಆಪ್ತ, ಈ ಆಪ್ತಸಂಕುಳವು ಚಿಗುರು, ಮುಗುಳು, ಹೂ, ಗಿಡ, ಬಳ್ಳಿಗಳಾಗಿರುವುದನ್ನು ಮಹಾಕವಿಗಳ ಭಾವಗೀತಗಳಲ್ಲಿ ಹಾಗೂ ಅಲ್ಲಲ್ಲಿ ಮಹಾಕಾವ್ಯಗಳಲ್ಲಿ ಕಂಡುಬರುವುದು ಕಾವ್ಯಾಭಿರುಚಿಯುಳ್ಳವರಿಗೆ, ಮಹಾಕವಿ ವರ್ಡ್ಸ್‌ವರ್ಥ್ ಒಂದೆಡೆಗೆ ಹೀಗೆ ಹೇಳುತ್ತಾನೆ: Every impulse from vernol wood may teach you more of man of moral evil

---

† Certain aspects of nature seem to have a peculiar power of awakening such mystical moods. Most of the striking cases which I have collected have occurred out of doors. William James, The Varietics of Religious Experience, The Modern Librery Newyork pp. 385–86.

**and of good than all the sages can."** ಇದು ನಿಸರ್ಗಾನುಭಾವಿ (**Nature mystics**)ಗಳ ಸಲಹೆ ಹಾಗೂ ಸಿದ್ಧಾಂತ. ಅನುಕಂಪಪೂರ್ಣ ನಿಸರ್ಗವು ಸಿದ್ಧರಿಗೆ, ಸಾಧಕರಿಗೆ, ಕಲೆಗಾರರಿಗೆ ತನ್ನಂತರಂಗದ ಸಿರಿಯನ್ನು ಭಿನ್ನ ಭಿನ್ನ ರೀತಿಯಲ್ಲಿ ಸೂರೆಮಾಡುವುದು ಹೊಸದಾಗಿಲ್ಲವಾದರೂ ಅದನ್ನು ಪಡೆದಾಗ ಆ ಸಂಪತ್ತಿನ ಸುಖವು ಲಭ್ಯವಾಗುವುದು. ಆ ಅಂತರಂಗದ ಭಂಡಾರತೆರೆವ ಕೀಲಿಕೈ ಪಡೆದಾಗಲೇ ಅದು ಸಾಧ್ಯ. ಮಹದೇವಿಯಕ್ಕ ಅಂಥ ಕೀಲಿಕೈ ಪಡೆದ ಮಹಾ ಸೌಂದರ್ಯಯೋಗಿಣಿ. ಅವಳು ಪಶ್ಯಂತಿ, ಪರಾವಾಕ್ ಸಂಪದಪಡೆದವಳು. ನಿಸರ್ಗದ ಕೂಡ ಮಾತನಾಡಬಲ್ಲವಳು. ಹೊರಗೆ ಕಂಡು ಮಾತನಾಡಬಲ್ಲ ಅವಳು ಒಳಗೂ ಕೋಗಿಲೆ, ತುಂಬಿ, ಹಂಸೆ ಮತ್ತು ನವಿಲೆ ಗಳನ್ನು ಯೋಗಸಾಧನಕ್ಕೆ ರಂಗಸ್ಥಲವಾದ ಈ ದೇಹವೆಂಬ ಶ್ರೀಗಿರಿಯಲ್ಲಿ. ಮಾಮರ, ಅದರಲ್ಲಿ ಬಗ್ಗಿಸುವ ಕೋಗಿಲೆ; ಕುಸುಮ ಹಾಗೂ ಅದಕೆರಗಿಬಂದು ಝೇಂಕರಿಸುವ ತುಂಬಿ; ಕೊಳ ಹಾಗೂ ಅದರ ತಡಿಯೊಳಾಡುವ ಹಂಸೆಗಳು; ಗಿರಿ ಹಾಗೂ ಗಹ್ವರಗಳು ಅವುಗಳಲ್ಲಾಡುವ ನವಿಲೆ ಮುಂತಾದವುಗಳನ್ನು ಕಂಡು ಮಾತನಾಡಿಸಿ. ಆಲಿಸಿ ಸಂತೋಷಪಟ್ಟಿದ್ದಾಳೆ. ಶಿವಯೋಗದನುಭಾವಿ ಗಳಿಗೆ ಇದೆಲ್ಲ ಸಹಜ. ಅವಳು ಕಂಡುದು, ಕೇಳಿದುದು ಅಸಾಮಾನ್ಯವಾಗಿ ಕಂಡರೂ ಅದು ಇನ್ನುಳಿದವರಿಗೆ ಕೇಳುವದಸಾಧ್ಯವೆಂದೇನಲ್ಲ. ಆದರೆ ಆ ನಿಸರ್ಗಕ್ಕೆ ಅದರ ಸಂಗೀತಕ್ಕೆ ತನ್ನನ್ನು ಅಣಿಗೊಳಿಸಿಕೊಂಡಿರಬೇಕಷ್ಟೆ.

> "ಒಡಲ ಕಳವಳಕ್ಕಾಗಿ ಅಡವಿಯಪೊಕ್ಕೆ.
> ಗಿಡುಗಿಡುದಪ್ಪದೆ ಬೇಡಿದೆನೆನ್ನಂಗಕ್ಕೆಂದು.
> ಅವು ನೀಡಿದವು ತಮ್ಮ ಲಿಂಗಕ್ಕೆಂದು.
> ನಾನು ಬೇಡಿ ಭವಿಯಾದೆ; ಅವು ನೀಡಿ ಭಕ್ತರಾದವು..."

ಈ ತೆರನಾದ ಬೋಧೆ ನಿಸರ್ಗಾನುಭಾವಿಗಳಿಗಷ್ಟೇ ಏಕೆ ಆತ್ಮಾನುಭವಿ ಗಳಿಗೂ ವೇದ್ಯ. ಅರವಿಂದರು, ರವೀಂದ್ರರು ಮೊದಲಾದ ಆತ್ಮಾನುಭಾವಿ ಗಳೂ ಇಂಥ ಮಹಾನುಭಾವವನ್ನು ಕಂಡುಂಡು ಹಾಡಿ ನಲಿದಿದ್ದಾರೆ. ಇಲ್ಲಿ ಬಳಸಲಾದ ವೀರಶೈವ ಪರಿಭಾಷೆಯಲ್ಲಿ ವಿಶ್ವದ ಚೇತನಾಚೇತನವೆಲ್ಲವೂ ಭಕ್ತ ತಾನು ಭವಿಯೆಂದು ಹೇಳುವ ಆಧೀರವಿಚಾರ ಅನೇಕ ತಾತ್ವಿಕ ತೊಡಕುಗಳಿಗೆ

ಎಡೆ ಮಾಡಿಕೊಡುತ್ತದೆ. ಇಲ್ಲಿ ಹೊರಹೊಮ್ಮುವ ಆಂತರಿಕ ಶಾಂತಿ ಹಾಗೂ ಧರ್ಮಬೋಧೆ ಅನುಪಮವಾದಂಥವು.

> 22 "ವನದೊಳಗಣದೇವ ತರುವೆಲ್ಲ ನೀವೆ
> ತರುವಿನೊಳಗಾಡುವ ಖಗಮೃಗವೆಲ್ಲ ನೀವೆ ಚೆನ್ನಮಲ್ಲಿಕಾರ್ಜುನಾ..."
> 23 "ವನವೆಲ್ಲ ಕಲ್ಪತರು, ಗಿಡವೆಲ್ಲಾ ಮರುಜವಣಿ.
> ಶಿಲೆಗಳೆಲ್ಲಾ ಪರುಷ, ನೆಲನೆಲ್ಲಾ ಅವಿಮುಕ್ತ ಕ್ಷೇತ್ರ,
> ಜಲವೆಲ್ಲಾ ನಿರ್ಜರಾಮೃತ ..
> ಚೆನ್ನಮಲ್ಲಿಕಾರ್ಜುನಯ್ಯನ ನಚ್ಚಿನ ಗಿರಿಯ ಸುತ್ತಿ
> ನೋಡುತ್ತ ಬಂದು ಕದಳಿಯ ಕಂಡೆ ನಾನು !

ಪಾಶ್ಚಾತ್ಯ ಅನುಭಾವಿಗಳಲ್ಲಿ ಸೇಂಟ ಥೆರಿಸಾ ಮೊದಲಾದವರು, ಸುಫೀ ಅನುಭಾವಿಗಳಲ್ಲಿ ರಾಬಿಯಾ ಮೊದಲಾದವರು, ಭಾರತೀಯ ಅನುಭಾವಿಗಳಲ್ಲಿ ಮೀರಾಬಾಯಿ ಮೊದಲಾದವರು ತಮ್ಮ ಪ್ರಿಯತಮ ಪುರುಷೋತ್ತಮನಾದ ವನ ಇರವನ್ನು ನಿತ್ಯದ ವಸ್ತುಗಳಲ್ಲಿ ಕಂಡು ಮಾತನಾಡಿ, ಹರುಷದೊಳೋಲಾಡಿದ್ದಾರೆ. ಆ ಆನಂದವನ್ನು ನಿನಾದಿಸುವ ವೀಣೆಯಾಗಿ, ತಂಬೂರಿಯಾಗಿ ನಾದಬ್ರಹ್ಮಣಿ. ದಿವ್ಯೋನ್ಮಾದ ಸ್ವರಸಂಜೀವಿನಿಯಿಂದ ದೈವೀ ಜೀವನ ವನ್ನು ಎಚ್ಚರಗೊಳಿಸಿದ್ದಾಳೆ ಈ ಮರವೆಯ ಜೀವನದಲ್ಲಿ ಮೈಮರೆದಿರುವಾಗ. ಇದು ಈ ದಿವ್ಯಗಾನದ ಮೋಡಿ. ಅವಳ ಮಾತು ಮಾಣಿಕ್ಯದಲ್ಲಿ ವ್ಯಕ್ತಿಗತದನು ಭಾವ, ಆ ಪರಶಿವತತ್ವ ಪ್ರಭೆ ತುಂಬಿಕೊಂಡಿವೆ. ಆ ಪರಸಿವ ಪ್ರಭೆ ಹೊತ್ತ ಸ್ಫಟಿಕದ ಘಟವಾದ ಮಹಾದೇವಿಯಕ್ಕ ಕೇವಲ ನಿಸರ್ಗ ರಮಣೀಯತೆ,ಅದರ ಮಹೋನ್ನತ ಸಂದೇಶಗಳ ಮುಖವಾಗಿರುವಂತೆ ಅವಳು ಪರಮಪುರು ಷೋತ್ತಮನ ಅನುಭಾವವನ್ನು ಮೆರೆದಿದ್ದಾಳೆ. ಆ ಅನುಭಾವವು ವೈಯಕ್ತಿಕ ವಾಗಿರುವಂತೆ ಸಾಮಾಜಿಕವೂ ಅಹುದು.

ಪುರುಷ ತತ್ವವು ದ್ವಿಮುಖ ಅನುಭಾವ ಜೀವನದ ಮೂಲತತ್ವ ವಾಗಿರುತ್ತದೆಯೆಂಬುದು ವೀರಶೈವ ಅನುಭಾವ ಜೀವನದಿಂದ ತಿಳಿದು ಬರು ವಂತೆ ವೇದೋಪನಿಷದಾಗಮಗಳಲ್ಲಿಯೂ ಅಭಿವ್ಯಕ್ತವಾಗಿದೆ. ಋಗ್ವೇದದ ಪುರುಷಸೂಕ್ತವು ಈ ವಿಚಾರ ಸರಣಿಯ ಪ್ರಥಮ ಪಥ್ಯವಾಗಿದೆಯೆಂಬುದಾ

ಅತ್ಯಂತ ಸ್ಫುಟವಾದ ವಿಚಾರವಾಗಿದೆ. ಈ ಮಾತು ಭಾರತೀಯ ಅನುಭಾವ ಸಾಹಿತ್ಯದ ಉತ್ತಮತಮ ಹಾಗೂ ಸ್ಪಷ್ಟಲಕ್ಷಣವಾಗಿದೆ. ಭಾರತೀಯ ಸಮಾಜ ರಚನೆಯಲ್ಲಿರುವ ಚಾತುರ್ವರ್ಣ್ಯವು ಈ ಪುರುಷ ಸೂಕ್ತವೆಂದು ಸಮಾಜತತ್ವ ಜ್ಞಾನಿಗಳೆಲ್ಲರೂ ಒಪ್ಪಿಕೊಂಡಿದ್ದಾರೆ. ಭಾರತವು ಕೇವಲ ಆಸ್ತಿಕವೆಂದು ಪ್ರಸಿದ್ಧವಾದ ವೈದಿಕ ಮತವೊಂದೆಯೇನಲ್ಲ: ನಾಸ್ತಿಕ ಮತವೂ ಭಾರತೀಯ ಮತವಹುದು. ಭಾರತೀಯ ಈ ಮತದಲ್ಲಿ ಕೂಡ ಸಾಮಾನ್ಯರ ಮತ, ಶ್ರಾವಕ ಮತ ಮತ್ತು ಜ್ಞಾನಿಗಳ ಮತ, ಶ್ರಮಣಮತವೆಂದು ಎರಡು ತರ: ಅದು ಕರ್ಮಕಾಂಡ ಹಾಗೂ ಜ್ಞಾನಕಾಂಡವೆಂಬ ವೈದಿಕ ಮತದಂತೆಯೇ ಇದೆ. ಬೌದ್ಧರಲ್ಲಿಯೂ ಈ ತೆರನಾದ ಸಾಮಾನ್ಯ ಹಾಗೂ ತಜ್ಞರ ಮತ ವಿಚಾರವಿಲ್ಲದಿಲ್ಲ. ಕರ್ಮಕಾಂಡದಲ್ಲಿ ಪ್ರಥಮ ಮೂರು ವರ್ಗಗಳು ಸೇರಿದರೆ, ಜ್ಞಾನಕಾಂಡದಲ್ಲಿ ಕೊನೆಯಮತವಾದ ಬ್ರಾಹ್ಮಣವೆಂಬುದು ಸೇರಿಕೊಳ್ಳುವುದು ಇದು ಸಮಾಜ ಶಾಸ್ತ್ರದ ವಿಚಾರ. ಪುರುಷ ತತ್ವವು ಈ ಚತುರ್ವಿಧ ತತ್ವ ದಲ್ಲಿ ವ್ಯಾಪಿಸಿಸ್ದು ಪ್ರವೃತ್ತಿ ಹಾಗೂ ನಿವೃತ್ತಿ ಮಾರ್ಗದಿಂದ ಚರಿಸುವನು. ಆಸ್ತಿಕ ಹಾಗೂ ನಾಸ್ತಿಕ ಮತಗಳಲ್ಲಿಯೂ ಈ ಪ್ರವೃತ್ತಿ ನಿವೃತ್ತಿಗಳ ವಿಚಾರ ವಿಲ್ಲದಿಲ್ಲ. ಈ ಮಾತು ವೈಯ್ಯಕ್ತಿಕ ಜೀವನಕ್ಕೂ ಅನ್ವಯಿಸಿ ವಿವರಿಸುವುದು ಜನಪ್ರಿಯ ವಿಚಾರವಾಗಿದೆ. ಈ ಅನುಭಾವ ವಿಚಾರವನ್ನು ಅಕ್ಕ ವಿವರಿಸು ತ್ತಾಳೆ. :[24]

> ಪಾತಾಳ ವಿತ್ತಿತ್ತ ಪಾದಂಗಳತ್ತತ್ತ.
> ದಶದಿಕ್ಕು ಇತ್ತಿತ್ತ ದಶಭುಜಂಗಳತ್ತತ್ತ.
> ಬ್ರಹ್ಮಾಂಡವಿತ್ತಿತ್ತ ಮಣಿಮುಕುಟವತ್ತತ್ತ.
> ಮಲ್ಲಿಕಾರ್ಜುನಯ್ಯಾ ನೀವೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ !

ಎಂಬ ವಿಚಾರಗಳು ಈ ಲೋಕದ ಸತ್ವವೆಲ್ಲಿದೆ ಎಂಬುದನ್ನು ಎತ್ತಿಹಿಡಿದು "ಬ್ರಹ್ಮಸತ್ಯ ಜಗನ್ಮಿಥ್ಯ" ಎಂಬುದರ ವಿಚಾರವನ್ನು ಬೋಧಿಸಿ ಈ 'ತೋರಿಕೆ' ತೋರಿದುದಾಗಿ 'ತೋರುವ'ದರಿಂದ ಭಿನ್ನವೆಂಬ ಮೂಲ ವಿಚಾರವನ್ನೇ ಹೊಗಲಾಡಿಸಿದ್ದಾಳೆ. ಅನುಭಾವವು ತಾರ್ಕಿಕಕ್ಕೆ ನಾನಾ ವಿಧವಾದ ಅರ್ಥಕ್ಕೆ ಅವಕಾಶ ಮಾಡಿಕೊಡುವುದಾದರೂ ನಿತ್ಯ ಸತ್ಯವಾದ ವಾಸ್ತವ ವಸ್ತುಸ್ಥಿತಿಯ ಬೆಳಕನ್ನು ಕಂಡಾಗಲೇ ತಾರ್ಕಿಕ ವಿಚಾರವು ಅದನ್ನು

ಒಪ್ಪುವಂತೆ, ನಿತ್ಯ ಸತ್ಯದ ಇರವನ್ನು ತರ್ಕವರಿತಾಗಲೇ ಅದು ಅನುಭಾವಕ್ಕೆ ಗ್ರಾಹ್ಯ. ಅವೆರಡರ ಸಾರ್ಥಕ್ಯ ಸತ್ಯ ಸಾಕ್ಷಾತ್ಕಾರದಲ್ಲಿ ಮಾತ್ರ. ತರ್ಕವು ಅನುಭಾವದೆತ್ತರಕ್ಕೆ ಹೋಗದೆಂಬ ವಾದಸರಣಿಯಿಂದ ಈ ಪ್ರಣಾಲಿ ಭಿನ್ನ ವೆಂದು ಕಾಣುವುದು. ಆದರೆ ಸತ್ಯವನ್ನು ತರ್ಕಕಾಣಲಾರದೆಂಬ ವಾದವು ತರ್ಕವು ಬಳಸಲ್ಪಟ್ಟ ಕ್ಷೇತ್ರವು ಆದರ ಶಕ್ತಿಮರ್ಯಾದೆಯನ್ನು ನಿರ್ಣಯಿಸಲು ಒಂದು ಸುಲಭ ಉಪಾಯವಾಗಿದೆ. ಅನುಭಾವವು ಕಂಡ ಸತ್ಯವು ತರ್ಕಕಾಣ ಬಲ್ಲುದು. ಅನುಭಾವದ ವಿಶ್ಲೇಷಣೆಯಲ್ಲಿ ತರ್ಕದ ಶುದ್ಧರೂಪವಿಲ್ಲದಿಲ್ಲ. ಅದೇ ಸಂಶಯಾತಿತ ಸಾಕ್ಷಾತ್ಕಾರ ಇಲ್ಲವೆ ಸತ್ಯದ ದರ್ಶನ. ಕಾರಣ ಸಮನ್ವಯ ವಿಲ್ಲವೆಂಬ ಪ್ರಣಾಲಿಗೆ ಇಲ್ಲಿ ಅವಕಾಶವಿಲ್ಲ. ಆದರೂ ಭಿನ್ನರೀತಿಯ ಪ್ರಣಾಲಿಗಿಲ್ಲಿ ಅವಕಾಶವಿಲ್ಲದಿಲ್ಲವೆಂದು ಗ್ರಹಿಸಬೇಕಾಗಿಲ್ಲ. ಈ ರೀತಿಯ ದ್ವಿಮುಖ ವಾದಸರಣಿಯ ವಿವರಣೆಗೆ ಈ ವಚನದಲ್ಲಿರುವ "ಇತ್ತಿತ್ತ" ಹಾಗೂ "ಅತ್ತತ್ತ" ಎಂಬ ಪದಗಳು ಅವಕಾಶ ಕಲ್ಪಿಸುವವು. ಅದೇ ರೀತಿಯಲ್ಲಿ "ಅದು," "ಇದು" ಎಂಬ ಪದಗಳು ಭಿನ್ನತೆಯನ್ನು ಬೋಧಿಸುವವೆಂದು ಕಂಡುಬಂದರೂ 'ಒಂದ'ನ್ನೆ ಬೋಧಿಸುವವು. ಆ ಪದಗಳು ಭಾವಾಂತರ ಬೋಧಕಗಳೇ ಹೊರತು ವಸ್ತ್ವಂತರವನ್ನಲ್ಲ. ಇದು 'ಪದಶಕ್ತಿ' ವೈಶಿಷ್ಟ್ಯ ವಾಗಿದೆ. ಇದು 'ವೈಖರಿ'ಯಲ್ಲಿಯ 'ಪರಾ'ವಾಕ್. ಪರಾವಾಕ್‌ದಲ್ಲಿ ಶಬ್ದ ಹಾಗೂ ಅರ್ಥಗಳು ಅಭಿನ್ನ.

ಈತನನ್ನೇ ಬಸವಣ್ಣನವರು ಹಾಡಿ ಹರುಷದೊಳೋಲಾಡಿದ್ದಾರೆ—

> ೨೫ ಸಹಸ್ರ ಶಿರ್ಷನಾದಿ ಪುರುಷನು ವೇದಪುರುಷನೊಬ್ಬ ಪುರುಷನು:
> ೨೬ ಎತ್ತೆತ್ತ ನೋಡಿದತ್ತತ್ತ ನೀನೇ ದೇವಾ;
> ಸಕಲ ವಿಸ್ತಾರದ ರೂಹು ನೀನೇ ದೇವಾ;
> ವಿಶ್ವತಶ್‌ಚಕ್ಷು ನೀನೇ ದೇವಾ; ವಿಶ್ವತೋ ಮುಖ ನೀನೇ ದೇವಾ;
> ವಿಶ್ವತೋಬಾಹು ನೀನೇ ದೇವಾ;
> ವಿಶತಃ ಪಾದ ನೀನೇ ದೇವಾ; ಕೂಡಲ ಸಂಗಮ ದೇವಾ.

ಈ ಪುರುಷೋತ್ತಮನ ತತ್ವವನ್ನು ಕಂಡುದು ಅನುಭಾವಿಗಳ ದೃಷ್ಟಿಕೋನ ದಲ್ಲಿ ಮಹದಂತರವಿದೆ. ಮಹಾ ಕವಿಗಳದು ಕಾಲ್ಪನಿಕತೆ ಇಲ್ಲವೆ ಪ್ರತಿಭಾ

ಗೋಚರ. ಅನುಭಾವಿಗಳದು ಆತ್ಮಗೋಚರ ಹಾಗೂ ನಿತ್ಯಜೀವನ. 'ಇವನಾರವ, ಇವನಾರವ ನೆನ್ನದಿರಯ್ಯ' ಎಂಬುದೂ 'ದಯವೇ ಧರ್ಮದ ಮೂಲ' ವೆಂದು ನಂಬಿ ಜೀವನ ನಡೆಸುವಂಥದಾಗಿದೆ. ಆ ಆತ್ಮ ತತ್ವವು ಆಚಾರರೂಪದಲ್ಲಿ ಅಭಿವ್ಯಕ್ತವಾಗುವುದು. ಅನುಭಾದ ತತ್ವಶಾಸ್ತ್ರ ಪರಿಭಾಷೆಯಲ್ಲಿ 'ಆಚಾರಲಿಂಗ.' ಶರಣರ ನುಡಿಯೆಲ್ಲ ತತ್ವ; ನಡೆಯಲ್ಲ ಆಚಾರ. ಮನೋನ್ಮಯವಾದ ಪ್ರತಿಭಾವಂತ ಕವಿಯು ಅತಿಮಾನವನನ್ನು ರಚಿಸಬಹುದು. ಅದು ಅವನ ಅಭೀಪ್ಸೆ. ಆದರೆ ಶರಣ ಅತಿಮಾನವನಾಗಿ ಬಾಳಿ ಆತನ ಅಭೀಪ್ಸೆಯನ್ನು ಪೂರೈಸುತ್ತಾನೆ. ಅವನದು ಭಾವಪ್ರಪಂಚ. ಇವನದು ಬ್ರಹ್ಮ ಅಥವ ಲಿಂಗ ಪ್ರಪಂಚ. ಕವಿಯ ಅಭೀಪ್ಸೆ ಮಾನವ ಗುರಿ ಹಾಗೂ ಆದರ್ಶವಾದರೆ, ಅನುಭಾವಿಯು ಆ ಪರಮ ಗುರಿ ಹಾಗೂ ಆ ಆದರ್ಶಗಳ ಮೂರ್ತಸ್ವರೂಪ. ಇದು ಮಾನವ ಜೀವನದ ಪರಮ ಗುರಿ.

> ಹೊಳೆವ ಕೆಂಜೆಡೆಗಳ ಮಣಿಮಕುಟದ ಒಪ್ಪುವ ಸುಲಿಪಲ್ಗಳ
> ನಗೆಮೊಗದ ಕಂಗಳ ಕಾಂತಿಯ
> ಈರೇಳು ಭುವನವ ಬೆಳಗುವ ದಿವ್ಯ ಸ್ವರೂಪನ ಕಂಡೆ ನಾನು.
> ಕಂಡೆನ್ನ ಕಂಗಳ ಬರ ಹಿಂಗಿತ್ತೆನಗೆ.
> ಗಂಡ ಗುಂಡರೆಲ್ಲ ಹೆಂಡಿರಾಗಿ ಆಳುವ ಗರುವನ ಕಂಡೆ ನಾನು.
> ಜಗದಾದಿಶಕ್ತಿಯೊಳು ಬೆರಸಿ ಮಾತನಾಡುವ
> ಪರಮ ಗುರು ಚೆನ್ನಮಲ್ಲಿಕಾರ್ಜುನನ ವಿಲವ ಕಂಡು ಬದುಕಿದೆನು.

ಈ ವಚನದಲ್ಲಿ ಬರುವ ವಿಚಾರಗಳು ಈ ಮೊದಲಿನ ವಚನದಲ್ಲಿ ಬರುವ 'ಕರಸ್ಥಲಕ್ಕೆ ಬಂದು ಚುಳುಕಾದಿರಿ' ಎಂಬ ಮಾತು ಅನುಭಾವಿಗಳೆಲ್ಲರು ಬಳಸಿಕೊಂಡು ಬಂದಂಥ ದೇವರನ್ನು ಕುರಿತ ದೃಷ್ಟಿಯನ್ನು ಕಾಣುತ್ತೇವೆ. (synthetic vision of God). "These have resolved the perpatual opposition between the personal and impersonal, the transcendent and immanent, static and dynamic aspects of Divine Nature: between the Absolute of philosophy and the "sure true friend" of devotional religion. They have done this not by

taking these apparently incompatible concepts one after the other; but by ascending to a height of spiritual intuition at which they are, as Ruysbrock said, 'melted and merged in Unit'', and perceived as the completing opposites of a perfect whole''.[27] ಸಕಲ, ನಿಷ್ಕಲ, ರೂಪುಗಳಾಗಿ ಸುಪ್ರಸಿದ್ಧವಾದ ತಾತ್ವಿಕ ವಿಚಾರಗಳ ಬಳಕೆಯು ಮಹಾದೇವಿಯಕ್ಕನಂಥ ಅನೇಕ ಅನುಭಾವಿಗಳಲ್ಲಿ ಕಂಡುಬರುವದು. ಸಕಲವೇ ನಿಷ್ಕಲ, ನಿಷ್ಕಲವೇ ಸಕಲ; ಇಲ್ಲವೆ ಸಾಕಾರವೇ ನಿರಾಕಾರ, ನಿರಾಕಾರವೇ ಸಾಕಾರವೆಂಬ ಅವರ ಅನುಭಾವದ ವಿವರಣೆಯು ಭಕ್ತನಲ್ಲಿ ಜಂಗಮವಡಗಿಪ್ಪ, ಜಂಗಮದಲ್ಲಿ ಭಕ್ತ ನಡಗಿಪ್ಪ ಎಂಬ ವೀರಶೈವ ಪಾರಿಭಾಷಿಕ ಪರಿವಿಡಿಯಲ್ಲಿ ತುಂಬಾ ಮನೋಜ್ಞ ವಾಗಿದೆ. ಸಾಕಾರದ ಪ್ರತೀಕವಾದ ಭಕ್ತಿಭಾವದಲ್ಲಿ ನಿರಾಕಾರ ಪ್ರತೀಕವಾದ ಜಂಗಮಭಾವ, ನಿರಾಕಾರದ ಪ್ರತೀಕವಾದ ಜಂಗಮಭಾವದಲ್ಲಿ ಸಾಕಾರದ ಪ್ರತೀಕವಾದ ಭಕ್ತಿಭಾವವೂ ಬಿಚ್ಚಿಬೇರಾಗದಂತೆ ಒಂದಾಗಿವೆಯೆಂಬುದೆ ಇದರ ಮಥಿತಾರ್ಥ. ಜ್ಞಾನರಹಿತವಾದ ಭಕ್ತಿಯು ಮೂಢ ನಂಬಿಗೆ. ಭಕ್ತಿ ರಹಿತವಾದ ಜ್ಞಾನವು ಶುದ್ಧ ಶೂನ್ಯ. ಇವರಡರಿಂದಲೂ ಪುರುಷಾರ್ಥ ಅಸಾಧ್ಯ. ಅನೇಕ ಆಚಾರ್ಯರು 'ಜ್ಞಾನೋತ್ತರ ಭಕ್ತಿ' ಎಂಬ ಪದವನ್ನು ಬಳಸಿರುವುದು ಚಿರಪರಿಚಿತ. ಅವರೆಲ್ಲ ಉಪನಿಷದಗಳ ಸಾರವಾದ ಬ್ರಹ್ಮ ಸೂತ್ರವಿಚಾರವನ್ನೇ ಈ ಪದದ ಬಳಕೆಯಿಂದ ಪ್ರತಿಪಾದಿಸುತ್ತಾರೆ. ಮಹಾದೇವಿಯಕ್ಕನಂಥ ಅನುಭಾವಿಗಳು ತತ್ವಸಮನ್ವಯ ಹಾಗೂ ಆ ತತ್ವ ಸಂಪಾದನಾ ಸಾಧನಗಳಾದ ಭಕ್ತಿ ಹಾಗೂ ಜ್ಞಾನಗಳ ಸಮನ್ವಯವನ್ನು ಮಾಡುವರೆಂಬುದು ಸ್ಪಷ್ಟವಿರುವಂತೆ ಅದು ಅತ್ಯಂತ ಅವಶ್ಯವಾಗಿರುತ್ತದೆ.

ನಿರಾಕರರೂಪಿ ಅಥವ ಶೂನ್ಯ ಸ್ವರೂಪಿ ಇಲ್ಲವೆ ಬಯಲಸ್ವರೂಪಿಯಾದ ಆ ಪರಬ್ರಹ್ಮವನ್ನು ಇಷ್ಟದೇವತೆಯಾಗಿ ಸರ್ವಾಂಗದಲ್ಲಿ ಧರಿಸಿ ಕಣ್ಣಿನ ಕಣ್ಣಾಗಿ ಮನದ ಮನವಾಗಿ, ಪ್ರಾಣದ ಪ್ರಾಣವಾಗಿ, ದೇಹದ ದೇಹವಾಗಿ—ಕಾರಣ, ಸೂಕ್ಷ್ಮ ಹಾಗೂ ಸ್ಥೂಲರೂಪಗಳಲ್ಲಿ ಇರುವನೆಂಬ ಅನುಭಾವವನ್ನು ಮಹಾದೇವಿಯಕ್ಕ ಹೇಳುವ ವಿಚಾರಗಳು ಇನ್ನೂ ಮುಂದೆ ಮುಂದೆ ಸಾಗಿ

ಅದೇ ಅವನಾಗಿ. 'ತಾನೆಂಬು'ದೇ ಅಜ್ಞಾನ, ಅದು ತಾನು ಬ್ರಹ್ಮವಾದುದನ್ನು ಮರೆಯುಹಚ್ಚಿದೆ ಎಂಬ ಸರ್ವೋತ್ಕೃಷ್ಟವಾದ ಸೈದ್ಧಾಂತಿಕ ವಿಚಾರವನ್ನು ಮಂಡಿಸುವಳು. ಮಹಾದೇವಿಯಕ್ಕ ಈ ವಿಚಾರವನ್ನು ಮಂಡಿಸುವ ತರ್ಕ ಶುದ್ಧವಾದನುಭಾವವು ಮನನೀಯವಾಗಿದೆ.[23]

"ನಾ ಹುಟ್ಟಿದಲ್ಲಿ ಸಂಸಾರ ಹುಟ್ಟಿತ್ತು.
ಸಂಸಾರ ಹುಟ್ಟಿದಲ್ಲಿ ಅಜ್ಞಾನ ಹುಟ್ಟಿತ್ತು.
ಅಜ್ಞಾನ ಹುಟ್ಟಿದಲ್ಲಿ ಆಶೆ ಹುಟ್ಟಿತ್ತು.
ಆಶೆ ಹುಟ್ಟಿದಲ್ಲಿ ಕೋಪ ಹುಟ್ಟಿತ್ತು.
ಆಕೋಪಾಗ್ನಿಯ ತಾಮಸಧೂಮ್ರ ಮುಸುಕಿದಲ್ಲಿ
ನಾ ನಿಮ್ಮ ಮರೆದು ಭವದುಃಖಕ್ಕೀಡಾದೆ
ನೀ ಕರುಣದಿಂದೆತ್ತಿ ಮರಹ ಹಿಂಗಡಿಸಿ
ನಿಮ್ಮ ಪಾದವನರುಹಿಸಯ್ಯಾ, ಚೆನ್ನಮಲ್ಲಿಕಾರ್ಜುನಯ್ಯಾ."

ಪರಬ್ರಹ್ಮವು ಸರ್ವಾಂತರ್ಯಾಮಿಯಾಗಿ ಸಚರಾಚರಗಳಲ್ಲಿ ಅಡಗಿದೆ ಇಲ್ಲವೆ ಇದ್ದೂ ಇಲ್ಲದಂತಿದೆ ಎಂಬ ಸುಪ್ರಸಿದ್ಧವಾದ ಅನುಭಾವ ಪರಿಭಾಷೆ ಯಲ್ಲಿ ಸಂಪಾದನೆಯನ್ನು ಮೆರೆದಿದ್ದಾಳೆ.[29]

ನೆಲದಮರೆಯ ನಿಧಾನದಂತೆ, ಫಲದಮರೆಯ ರುಚಿಯಂತೆ,
ಶಿಲೆಯಮರೆಯ ಹೇಮದಂತೆ; ತಿಲದ ಮರೆಯ ತೈಲದಂತೆ,
ಮರದ ಮರೆಯ ತೇಜದಂತೆ, ಭಾವದ ಮರೆಯ ಬ್ರಹವಾಗಿಪ್ಪ
ಚನ್ನಮಲ್ಲಿಕಾರ್ಜುನನ ನಿಲವನರಿಯಬಾರದು.

ಈ ರೀತಿಯಾಗಿ ಎಲ್ಲದರಲ್ಲಿಯೂ ಅಡಗಿಕೊಂಡಿರ್ದವನು "ಪ್ರಾಣದಲ್ಲಿ ಸಂದು" "ಮನಕ್ಕೆ ಮನವಾಗಿ ಬಂದ" ದೇವನನ್ನು "ಕಾಣದಡೆ ಆನೆಂತು ಬದುಕುವೆ ನವ್ವಾ!"[30] ಎಂಬಲ್ಲಿ ನೂತನ ವಿಚಾರಗಳನ್ನು ಅಭಿವ್ಯಕ್ತಿಗೊಳಿಸಿ ನಿರಾಕಾರ ವಾದುದು, ಕಾಣದುದು ಕಾಣಬಾರದಿರದು ಎಂದಿದ್ದಾಳೆ. ಯಾಕೆ ಕಾಣಲಾಗು ತ್ತಿಲ್ಲ ಎಂಬುದನ್ನು ಅವಳು ಈ ರೀತಿ ತಿಳಿಸುತ್ತಾಳೆ.[31]

ನೋಡಿಹೆನೆಂದಡೆ ದೃಷ್ಟಿಮರೆಯಾಯಿತ್ತು.
ಕೂಡಿಹೆನೆಂದಡೆ ಭಾವ ಮರೆಯಾಯಿತ್ತು.
ಎನೆಂಬೆನೆಂತೆಂಬೆನಯ್ಯಾ ?
ಅರಿದಿಹೆನೆಂದಡೆ ಮರಹು ಮರೆಯಾಯಿತ್ತು.
ನಿನ್ನ ಮಾಯೆಯನತಿಗಳವಡೆ ಎನ್ನಳವೆ ?
ಕಾಯಯ್ಯಾ ಚೆನ್ನಮಲ್ಲಿಕಾರ್ಜುನಾ !'

ಮರೆ ಮಾಡುವ ಅವುಗಳನ್ನು ಓರೆಮಾಡಿ ನೋಡುವುದೇ 'ಬದಕು' ಇಲ್ಲ ವಾದರೆ 'ಅಗಲುವಿಕೆ' ಎಂದು ಹೇಳಿ, 'ಅಗಲುವದು' ಅಸಾಧ್ಯ ಯಾಕಂದರೆ ಅದು ಸ್ವಭಾವ ವಿರುದ್ಧವಾದ ಇರವು ಅನ್ನುವಳು. ಸ್ವಾಭಾವಿಕವಾದುದಾಗಲೇ ಅಂದರೆ ನಿರಾಕಾರನಾಗಿ ಸರ್ವಾಂತರ್ಯಾಮಿಯಾಗಿ ಅದೇಕೆ ಸರ್ವವವೂ ತಾನಾಗಿ "ಅರಿದೆನೆಂದಡೆ ಅರಿಯಬಾರದುನೋಡಾ, ಘನಕ್ಕೆ ಘನ ತಾನೇ ನೋಡಾ..."[32] ತಾನುತಾನಾದಾಗ ಅನುಭಾವಿಗಳು ಸಮರಸ ಬೋಧೆಯನ್ನು ನಿವೇದಿಸುತ್ತಾರೆ:[33]

"ಒಡಲಿಲ್ಲದ ನುಡಿಯಿಲ್ಲದ
ನಲ್ಲನ ಒಡಗೂಡಿ ಸುಖಿಯಾದೆ. ಕೇಳಿರಯ್ಯಾ......"

ಇದರ ಅನುಭವವು ನಿಶ್ಚಯದ ಭಾಷೆಯಲ್ಲಿ ಹೇಳಿ ಅನುಭಾವದ ಪರಾಕಾಷ್ಠೆ ಯನು ತಿಳಿಸಿದ್ದಾಳೆ:

"...ತನ್ನ ತಾನರಿದು ತಾನಾದಡೆ ಚೆನ್ನಮಲ್ಲಿಕಾರ್ಜುನ ತಾನೆ ಬೇರಿಲ್ಲ..."[34]

ಇದೇ ಸರ್ವಶ್ರೇಷ್ಠ ಸಾಕ್ಷಾತ್ಕಾರ, ಅನುಭಾವ. ಇದರಿಂದ ಮೇಲೆ ಅನುಭಾವ ವಿಲ್ಲ.

•

